# ಅಚಲ

ಸಂಪುಟ - 13
ಸಂಚಿಕೆ - 2

ಮಾಸಿಕ

ಅಕ್ಟೋಬರ್ 1999

ಒಳಪುಟಗಳಲ್ಲಿ



ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಬೆಂಗಳೂರು

ಪ್ರಕಾಶಕರು

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ ಬೆಂಗಳೂರು

ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ರೂ. 10 ಬ್ಯಾಂಕ್ ಕಮೀಷನ್ ಸೇರಿಸಿ ಕಳುಹಿಸಬೇಕು. ಎಂ.ಓ. ಫಾರ್ಮಿನ ಕೊನೆಯ ಭಾಗದಲ್ಲಿ ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸಬೇಕು.

ಬದಲಾದ ವಿಳಾಸಗಳನ್ನು ದಯವಿಟ್ಟು ಬರೆದು ತಿಳಿಸಿ.

ಅಚಲ ಅಕ್ಟೋಬರ್ 99ರ ಸಂಚಿಕೆಯ ಪೂರ್ತಿ ಖರ್ಚನ್ನು ನಮ್ಮ ಪತ್ರಿಕೆಯ ಬಳಗದ ಶ್ರೀಮತಿ ವಿ. ಸುಭದ್ರಾರವರು ವಹಿಸಿಕೊಂಡಿದ್ದಾರೆ. ಅವರಿಗೆ ಸಂಪಾದಕ ಮಂಡಲಿಯ ಪರವಾಗಿ ವಂದನೆಗಳು.

ಆತ್ಮೀಯರೇ,

ಕಳೆದ 12 ವರ್ಷಗಳಿಂದಲೂ ತಾವುಗಳು ಪ್ರೀತಿ, ಅಭಿಮಾನದಿಂದ ಅಚಲ ಪತ್ರಿಕೆಯನ್ನು ನಿಮ್ಮದಾಗಿಸಿಕೊಂಡು ಪೋಷಿಸುತ್ತಾ ಬಂದಿರುತ್ತೀರಿ. ಕಳೆದ ಏಪ್ರಿಲ್ ಸಂಚಿಕೆಯಿಂದ ಅಚಲ ಪತ್ರಿಕೆ ಪ್ರಕಟವಾಗಿಲ್ಲ. ಹೆಚ್ಚಿದ ಅಂಚೆ ದರದಲ್ಲಿ ಪತ್ರಿಕೆಯನ್ನು ತರುವುದು ನಮಗೆ ಅಸಾಧ್ಯದ ವಿಷಯವಾಗಿತ್ತು. ಆದ್ದರಿಂದ ದ್ವೈಮಾಸಿಕ ಪತ್ರಿಕೆಯನ್ನು ಮಾಸಿಕವನ್ನಾಗಿ ತರುವ ನಿರ್ಧಾರದಿಂದ ಸರ್ಕಾರಿ ಕಛೇರಿಗಳಿಗೆ ಅಲೆದಾಡಿ ಅಂಚೆ ರಿಯಾಯಿತಿಯನ್ನು ಗಳಿಸಿಕೊಳ್ಳುವ ವೇಳೆಗೆ ಆರು ತಿಂಗಳೇ ಕಳೆದು ಹೋದವು. ಈ ಅವಧಿಯಲ್ಲಿ ಪತ್ರಿಕೆಯನ್ನು ಹೊರತರಲಾಗದ ನಮ್ಮ ಅಸಾಮರ್ಥ್ಯಕ್ಕೆ ನಿಮ್ಮ ಕ್ಷಮೆ ಕೇಳುತ್ತೇವೆ.

ಅಚಲ ಅಕ್ಟೋಬರ್ ಸಂಚಿಕೆಯಿಂದ ಮಾಸಿಕವಾಗಿ ಹೊರಬರುತ್ತಿದೆ. ಈ ಸಂದರ್ಭದಲ್ಲಿ, ಖ್ಯಾತ ವಕೀಲರೂ, ಲೇಖಕಿಯೂ ಆದ ಶ್ರೀಮತಿ ಹೇಮಲತಾ ಮಹಿಷಿಯವರು ನಮ್ಮ ಅಚಲ ಸಂಪಾದಕ ಬಳಗದ ಸದಸ್ಯರಾಗಿ ನಮ್ಮೊಡನೆ ಸೇರಿಕೊಳ್ಳುತ್ತಿದ್ದಾರೆಂದು ತಿಳಿಸಲು ಹರ್ಷಿಸುತ್ತೇವೆ.

ಅಚಲದ ಚಂದಾ ವಿವರಗಳು ಹೀಗಿವೆ :

ವಾರ್ಷಿಕ ಚಂದಾ : ರೂ. 40/- (ವ್ಯಕ್ತಿಗಳಿಗೆ)
ರೂ. 75/- (ಸಂಸ್ಥೆಗಳಿಗೆ)

ಆಜೀವ ಚಂದಾ : ರೂ. 300/- (ವ್ಯಕ್ತಿಗಳಿಗೆ)
ರೂ. 400/- (ಸಂಸ್ಥೆಗಳಿಗೆ)

'ಅಚಲ' ಪತ್ರಿಕೆಗೆ ಚಂದಾದಾರರಾಗಿರಿ. ಚಂದಾ ನವೀಕರಿಸಿ ಮತ್ತು ನಿಮ್ಮ ಆಪ್ತರನ್ನೂ ಚಂದಾದಾರರನ್ನಾಗಿಸಿ.

ಅಚಲ ವಿಳಾಸ

713, ವಿಜಯಾ ಮ್ಯಾನ್‌ಶನ್, 1ನೇ ಮುಖ್ಯರಸ್ತೆ, ಆರ್.ಪಿ.ಸಿ.
ಬಡಾವಣೆ, ಬೆಂಗಳೂರು - 560 040.

# ಭಿನ್ನ ಚಿತ್ರ ಬಿಂಬಿಸದ ಚುನಾವಣೆ

ಕೇಂದ್ರ ಮತ್ತು ರಾಜ್ಯದಲ್ಲಿ ಈಗ ಹೊಸ ಮಂತ್ರಿ ಮಂಡಲ ಅಸ್ತಿತ್ವಕ್ಕೆ ಬಂದಿದೆ. ಸಂಸತ್ತಿನಲ್ಲಿ ಶೇಕಡ 33ರಷ್ಟು ಸ್ಥಾನಗಳನ್ನು ಮಹಿಳೆಯರಿಗೆ ಮೀಸಲಾಗಿಡಬೇಕೆಂದು ವಿವಿಧ ರಾಜಕೀಯ ಪಕ್ಷಗಳು ಮೊಸಳೆ ಕಣ್ಣೀರು ಸುರಿಸಿದ್ದು ಈಗ ಇತಿಹಾಸ. ಇದೀಗ ಪೂರ್ಣಗೊಂಡ ಲೋಕಸಭೆ ಚುನಾವಣೆ ಫಲಿತಾಂಶ ಒಂದು ದಿಕ್ಸೂಚಿಯಾದರೆ, ಮೀಸಲು ಮಸೂದೆ ಅಂಗೀಕಾರದ ದಾರಿ ಇನ್ನೂ ಬಲುದೂರ. ಈಗಿನ ಲೋಕಸಭೆಯನ್ನೇ ಗಮನಿಸಿ. ಅಲ್ಲಿ ಸದಸ್ಯೆಯರ ಸಂಖ್ಯೆ ಈಗ 50. ಇದು ಒಟ್ಟು ಸದಸ್ಯರ ಸಂಖ್ಯೆಯಲ್ಲಿ ಶೇಕಡ 10 ಕೂಡ ಇಲ್ಲ. ಈ ಬಾರಿ 537 ಲೋಕಸಭಾ ಸ್ಥಾನಗಳಿಗೆ ಚುನಾವಣೆ ನಡೆಯಿತು. ಸ್ಪರ್ಧಿಸಿದ್ದ 4648 ಅಭ್ಯರ್ಥಿಗಳಲ್ಲಿ 275 ಮಂದಿ ಮಹಿಳೆಯರು. ರಾಜಕೀಯ ಪಕ್ಷಗಳು ತಮಗೆ ಬೇಕೆನಿಸಿದಾಗ ಮಾತನಾಡುವ ಮೀಸಲಾತಿ ಶೇಕಡಾಗಿಂತ ಇದು ತೀರ ಕಡಿಮೆಯಾಗಿದ್ದರೂ ಸ್ವಾತಂತ್ರ್ಯಾನಂತರ ಇದೇ ಮೊದಲಬಾರಿಗೆ ಮಹಿಳಾ ಎಂ.ಪಿ.ಗಳ ಸಂಖ್ಯೆ ಅರ್ಧ ಶತಕ ಮುಟ್ಟಿದೆ ಎಂಬುದೊಂದು ಗಮನಾರ್ಹ ಅಂಶ. ಆದರೆ ಸಮಾಧಾನ ತರುವಂಥದಂತೂ ಅಲ್ಲ. ಕಾಂಗ್ರೆಸ್, ಭಾರತೀಯ ಜನತಾ ಪಕ್ಷ, ಜನತಾದಳ (ಜಾತ್ಯತೀತ), ಜನತಾದಳ (ಸಂಯುಕ್ತ), ಸಿ.ಪಿ.ಎಂ., ಸಿಪಿಐ ಮತ್ತು ಬಹುಜನ ಸಮಾಜ ಪಕ್ಷಗಳಂಥ ಪ್ರಮುಖ ರಾಜಕೀಯ ಪಕ್ಷಗಳು ಒಟ್ಟು 103 ಮಹಿಳೆಯರನ್ನು ಕಣಕ್ಕಿಳಿಸಿದ್ದವು. ಈ ಪಕ್ಷಗಳ ಒಟ್ಟು ಅಭ್ಯರ್ಥಿಗಳ ಸಂಖ್ಯೆ 1300. ಉಳಿದೆಲ್ಲ ಪಕ್ಷಗಳಿಗಿಂತಾ ಕಾಂಗ್ರೆಸ್ ಹೆಚ್ಚು ಮಹಿಳೆಯರಿಗೆ ಟಿಕೆಟ್ ನೀಡಿತ್ತು. ಕಾಂಗ್ರೆಸ್‌ನ 453 ಅಭ್ಯರ್ಥಿಗಳಲ್ಲಿ 51 ಮಂದಿ ಮಹಿಳೆಯರಾಗಿದ್ದರು. ಶೇಕಡಾವಾರು ಪ್ರಮಾಣದಲ್ಲಿ ಇದು ಕೇವಲ 9 ! ಸಿಪಿಎಂ-ಸಿಪಿಐನ ಶೇಕಡಾವಾರು ಪ್ರಮಾಣ ಶೇಕಡ 7. ಉಳಿದ ಪಕ್ಷಗಳ ಬಗೆಗೆ ಹೇಳುವ ಅಗತ್ಯವೇ ಇಲ್ಲ. ಗೆಲ್ಲುವ ವ್ಯಕ್ತಿಗಳ ಅಭಾವವೇ ಮಹಿಳಾ ಅಭ್ಯರ್ಥಿಗಳ ಸಂಖ್ಯೆ ಕಡಿಮೆಗೆ ಕಾರಣವೆಂದು ರಾಜಕೀಯ ಪಕ್ಷಗಳು ವಾದಿಸಿವೆ. ಆದರೂ ಮಹಿಳಾ ಸಂಘಟನಕಾರರು ಇದನ್ನು ಒಪ್ಪುವುದಿಲ್ಲ. ಅಭ್ಯರ್ಥಿ ಗೆಲ್ಲುವ ಸಾಮರ್ಥ್ಯವನ್ನು ಅಳೆಯುವ ಅಂಶಗಳಾವುವು ಎಂಬುದು ಅವರ ಪ್ರಶ್ನೆ. ಇದು ಈಗ ಗದ್ದಿರುವ 50 ಮಹಿಳೆಯರಲ್ಲಿ -8 ಮಂದಿ ಸಚಿವೆಯರಾಗಿದ್ದಾರೆ. ಅವರಲ್ಲಿ ಮಮತಾ ಬ್ಯಾನರ್ಜಿ ಮಾತ್ರ ಸಂಪುಟ ದರ್ಜೆ ಸಚಿವರು.

ಸಂಸತ್ತಿನಲ್ಲಿ ಅತ್ಯಂತ ಅಲ್ಪ ಸಂಖ್ಯಾತರಾಗಿರುವ ಮಹಿಳೆಯರು ಮೀಸಲು ಮಸೂದೆ ಬಗೆಗೆ ಚಿಂತಿಸುವುದು ಸಹಜವೇ. ಮಹಿಳಾ ಮೀಸಲಾತಿ ಮಸೂದೆ ಸಂಸತ್ತಿನಲ್ಲಿಯೇ ಸಾಕಷ್ಟು ಚರ್ಚೆಗೆ ಒಳಗಾಗಿದೆ. ಇದು ಕಾನೂನಾಗಿ ಬಂದರೆ ಸಾಕಷ್ಟು ಮಹಿಳೆಯರು ರಾಜಕೀಯದಲ್ಲಿ ನಿರ್ಣಾಯಕ ಪಾತ್ರವಹಿಸುವರು. ಆದರೆ ಮೀಸಲಾತಿ ಮಸೂದೆ ಈ ಶತಮಾನದಲ್ಲಿಯೇ ಕಾನೂನಾಗಿ ಬರಬಹುದೇ ಎಂಬುದು ಇನ್ನೂ ಯಕ್ಷ ಪ್ರಶ್ನೆ. ವಿಪರ್ಯಾಸವೆಂದರೆ ಮೀಸಲಾತಿ ತರಬೇಕೆಂಬ ಪಕ್ಷಗಳಲ್ಲೇ ಸದಸ್ಯರ ನಡುವೆ ವಿರೋಧ ವ್ಯಕ್ತವಾಗಿರುವುದು. ಅವರು ಕೊಡುವ ಕಾರಣ ಅನೇಕ. ಮಹಿಳೆ ರಾಜಕೀಯಕ್ಕೆ ಇಳಿದರೆ ಕುಟುಂಬ ವ್ಯವಸ್ಥೆ ಅಸ್ತವ್ಯಸ್ತವಾಗುವುದಂತೆ. ಹಿಂದುಳಿದ ಹಾಗೂ ಅಲ್ಪ ಸಂಖ್ಯಾತರ ನೆಪವೊಡ್ಡಿ ಕೆಲವರು ಮಸೂದೆಯನ್ನು ವಿರೋಧಿಸಿದ್ದಾರೆ. ಒಟ್ಟಾರೆ. ಈ ಮಸೂದೆ ಕಾನೂನಾದರೆ ಅನೇಕ ಮಂದಿ ತಮ್ಮ ಕ್ಷೇತ್ರಗಳನ್ನೂ ಕಳೆದುಕೊಳ್ಳಬೇಕಾಗುತ್ತದೆ. ಬಹುಶಃ ಈ ಹತಾಶೆಯೇ ವಿರೋಧದ ರೂಪದಲ್ಲಿ ಪ್ರತಿಬಿಂಬಿತವಾಗಿರಬೇಕು.

ಗೆದ್ದು ಬಂದಿರುವ ಮಹಿಳೆಯರೂ ಸಂಸತ್ತಿನಲ್ಲಿ ಕ್ರಿಯಾಶೀಲರಾಗಿರುವುದು ಕಡಿಮೆ ಎಂಬುದು ಕಟುಸತ್ಯ. ಈ ಸಂದರ್ಭದಲ್ಲಿ 'ಸೆಂಟರ್ ಫಾರ್ ಸೋಶಿಯಲ್ ರೀಸರ್ಚ್' ಆಶ್ರಯದಲ್ಲಿ ರಂಜನಾ ಕುಮಾರಿ ಹಾಗೂ ಅಂಜಲಿದುಬೆ ಲೋಕಸಭೆಯ ಮಹಿಳಾ ಸದಸ್ಯರ ಬಗೆಗೆ ನಡೆಸಿದ ಸಮೀಕ್ಷೆ ಗಮನಾರ್ಹ. ಅವರ ಪ್ರಕಾರ ರಾಜಕೀಯಕ್ಕೆ ಬಂದವರಲ್ಲಿ ಹೆಚ್ಚು ಮಂದಿ ಕುಟುಂಬದಲ್ಲಿಯ ರಾಜಕೀಯ ಹಿನ್ನೆಲೆಯಿಂದ ಬಂದವರು. 1985-89ರ ಅವಧಿಯಲ್ಲಿ 14 ಅಧಿವೇಶನಗಳು ನಡೆದಿದ್ದವು. ಅಲ್ಪಾವಧಿ ಚರ್ಚೆ ವಿಷಯಗಳಲ್ಲಿ ಪಾಲ್ಗೊಂಡಿದ್ದ ಮಹಿಳೆಯರ ಸಂಖ್ಯೆ 4. ಹಾಗೆಂದು ಪುರುಷರು ಪೂರ್ಣ ಪ್ರಮಾಣದಲ್ಲಿ ಪಾಲ್ಗೊಂಡರೆಂದು ಅರ್ಥವಲ್ಲ. ಆದರೆ ಇದ್ದ ಕೆಲವೇ ಮಹಿಳೆಯರೂ ಸಕ್ರಿಯವಾಗಿಲ್ಲದಿದ್ದರೆ ಸಾಮಾನ್ಯ ಮಹಿಳೆಯರ ಸಮಸ್ಯೆಗಳನ್ನು ಪ್ರತಿನಿಧಿಸುವವರಾರು ? ಇದರಿಂದ ಕನಿಷ್ಠ ಮೀಸಲಾತಿಯಿಂದ ಸದಸ್ಯೆಯರ ಸಂಖ್ಯೆ 180 ಕ್ಕೆ ಏರಿದರೆ ಅವರ ಧ್ವನಿ ಕೇಳುವಂತಾಗಬಹುದೇನೋ ಎಂಬುದು ಈ ಸಮೀಕ್ಷೆ ನಡೆಸಿದವರ ಆಶಯ. ರಾಜಕೀಯ ಪಕ್ಷಗಳಲ್ಲಿ ದೃಢ ಸಂಕಲ್ಪವಿಲ್ಲದೆ ಮಹಿಳೆಯರ ಸಂಖ್ಯೆ ಹೆಚ್ಚಾಗದು. ಚುನಾವಣೆಗಳಲ್ಲಿ ಗೆಲುವು ಸಾಧಿಸುವ ಮಹಿಳೆಯರಲ್ಲಿ ಹೆಚ್ಚು ಮಂದಿ ಪಕ್ಷಗಳ ತಳಹದಿ

ಅಗತ್ಯ. ವಾಸ್ತವಾಂಶವೇನೆಂದರೆ, ಕಾಂಗ್ರೆಸ್ ಮತ್ತು ಬಿಜೆಪಿಯು ತಮ್ಮ ಕಾರ್ಯಕಾರಿ ಸಮಿತಿಗಳಲ್ಲಿ ಮಹಿಳೆಯರಿಗೆ ಪ್ರಾತಿನಿಧ್ಯ ನೀಡಿರುವುದನ್ನು ಬಿಟ್ಟರೆ ಬೇರೆ ಪಕ್ಷಗಳಲ್ಲಿ ಇದು ಕಾಣಸಿಗದು. ಎಡಪಕ್ಷಗಳೂ ತಮ್ಮ ಪಾಲಿಟ್‌ಬ್ಯೂರೋದಲ್ಲಿ ಮಹಿಳೆಯರಿಗೆ ಪ್ರಾತಿನಿಧ್ಯ ನೀಡಿಲ್ಲ.

ವಿಧಾನಸಭೆಗಳ ಪರಿಸ್ಥಿತಿ ಕೂಡ ಹೆಚ್ಚು ಭಿನ್ನವಾಗಿಲ್ಲ. ಮುಖ್ಯಮಂತ್ರಿಗಳ ಸ್ಥಾನವನ್ನೂ ಗಮನಿಸಿದರೆ, ಇತ್ತೀಚೆಗೆ ಆಯ್ಕೆಯಾದ ಶೀಲಾ ದೀಕ್ಷಿತ್ ಬಿಟ್ಟರೆ ಇನ್ನಾರೂ ಇಲ್ಲ. ಬಿಹಾರದ ರಾಬ್ಡಿದೇವಿ ಹಾಗೂ ದೆಹಲಿಯ ಸುಷ್ಮಾ ಸ್ವರಾಜ್ ಅವರು ಪುರುಷ ಪ್ರಧಾನ ರಾಜಕೀಯ ಮಹಿಳೆಯರನ್ನು ಹೇಗೆ ಬಳಸಿಕೊಳ್ಳುತ್ತದೆ ಎಂಬುವುದಕ್ಕೆ ಸ್ಪಷ್ಟ ಉದಾಹರಣೆಗಳು. ಈ ಬಾರಿ ಸುಷ್ಮಾ ಸ್ವರಾಜ್‌ಗೆ ಟಿಕೆಟ್ ನೀಡಿರಲೇ ಇಲ್ಲ. ಬಳ್ಳಾರಿಯಲ್ಲಿ ಅವರನ್ನು ಅಭ್ಯರ್ಥಿಯನ್ನಾಗಿ ಮಾಡಿದ 'ಪ್ರಸಂಗ' ಈಗ ಇತಿಹಾಸ.

ವಿವಿಧ ರಾಜಕೀಯ ಪಕ್ಷಗಳು ಈ ಚುನಾವಣೆಯಲ್ಲಿ ಪ್ರಸ್ತಾಪಿಸಿದ್ದ ವಿಷಯಗಳು ಅವುಗಳಿಗೆ ಗೌರವ ತರುವಂತಹುದಾಗಿರಲಿಲ್ಲ. ಆರ್ಥಿಕ ಸ್ಥಿತಿ, ಮೀಸಲು ಮಸೂದೆ, ನಿರುದ್ಯೋಗ, ಬಹುರಾಷ್ಟ್ರೀಯ ಸಂಸ್ಥೆಯಂಥವು ಅವುಗಳಿಗೆ ಪ್ರಮುಖವೆನಿಸಲಿಲ್ಲ. ಪದೇ ಪದೇ ನಡೆದ ಚುನಾವಣೆಗಳಿಂದ ರಾಷ್ಟ್ರದ ಆರ್ಥಿಕ ಪರಿಸ್ಥಿತಿ ಕುಸಿದಿರುವಾಗ ರಾಜಕೀಯ ಪಕ್ಷಗಳು ಮತೀಯವಾದ, ನಾಯಕರ ವಿದೇಶಿ ಸಂಜಾತದ ಬಗೆಗೆ ಮಾತನಾಡಿವೆ ! ಬಹು-ಭೇಟಿ, ಭಾರತೀಯ ನಾರಿ, ಉಡುಗೆ ತೊಡುಗೆ ಬಗೆಗೆ ಪ್ರಸ್ತಾಪಿಸಿವೆ. ಈ ಪಕ್ಷಗಳಿಗೆ ಈ ದೇಶದ ಬಹುಸಂಖ್ಯಾತ ಜನರಿಗೆ ಕುಡಿಯುವ ನೀರು, ಆಹಾರ, ವಸತಿ, ಶಿಕ್ಷಣದಂಥ ಕನಿಷ್ಠ ಸೌಲಭ್ಯಗಳೂ ಇಲ್ಲವೆಂಬುದು ತಿಳಿಯದೇನೋ. ಬಹುಶಃ ಈ ಶತಮಾನದ ಕೊನೆಯ ಚುನಾವಣೆಯ ವಿಪರ್ಯಾಸ ಇದ ಏನೋ.

*- ಎನ್. ಗಾಯತ್ರಿ ದೇವಿ.*

---

## ಖಂಡನೀಯ ಹೇಯಕೃತ್ಯ

ಭಾರತದ ಗಣರಾಜ್ಯೋತ್ಸವದ ಸುವರ್ಣ ಮಹೋತ್ಸವವನ್ನು ಆಚರಿಸುವ ಹಂತದಲ್ಲಿದ್ದೇವೆ. ನಮ್ಮದು ಸಾರ್ವಭೌಮ, ಸಮಾಜವಾದಿ, ಸರ್ವಧರ್ಮ ಸಮಭಾವದ, ಜಾತ್ಯಾತೀತ, ಪ್ರಜಾಸತ್ತಾತ್ಮಕ ಗಣರಾಜ್ಯ. ಭಾರತದ ಸಂವಿಧಾನದಲ್ಲಿ ಅತ್ಯಪೂರ್ವ ಮಾನವೀಯ ಭಾಗವೆಂದರೆ ಪರಿಚ್ಛೇದ-17. 'ಅಸ್ಪೃಶ್ಯತೆಯನ್ನು ನಿರ್ಮೂಲನಗೊಳಿಸಲಾಗಿದೆ ಮತ್ತು ಯಾವುದೇ ರೂಪದಲ್ಲಿ ಅಸ್ಪೃಶ್ಯತೆ ಆಚರಣೆಯನ್ನು ನಿಷೇಧಿಸಲಾಗಿದೆ. ಇಂಥ ಆಚರಣೆ ನಡೆದಲ್ಲಿ, ಅದು ದಂಡನೀಯ ಅಪರಾಧ' ಎಂದು ಮಾನವ ಮಂತ್ರ ಪಠಿಸಲಾಗಿದೆಯಾದರೂ ವಾಸ್ತವವಾಗಿ ಐವತ್ತು ವರ್ಷಗಳ ನಂತರವೂ ಅಸ್ಪೃಶ್ಯತಾ ಆಚರಣೆ ಪೂರ್ತಿ ನಿಂತಿಲ್ಲ.

ಆಂಧ್ರ ಪ್ರದೇಶದ ಅನಂತಪುರದ ಜಿಲ್ಲೆಯ ಮಾಲಸಮುದ್ರಂ ಗ್ರಾಮದಲ್ಲಿ ಸಾರ್ವಜನಿಕ ಬಾವಿಯೊಂದರಲ್ಲಿ ದಲಿತ ಮಹಿಳೆ ಗಂಗರತ್ನಮ್ಮ ನೀರು ತೆಗೆದುಕೊಂಡದ್ದೇ ಒಂದು ಮಹಾ ಅಪರಾಧವಾಗಿದೆ. ಅವಳ ಈ ಕೃತ್ಯಕ್ಕೆ ಆ ಗ್ರಾಮದ ಸವರ್ಣೀಯರು ಆಕೆಯನ್ನು ಬೆತ್ತಲೆಗೊಳಿಸಿ, ಮೆರವಣಿಗೆ ಮಾಡಿದ್ದಾರೆ. ಆಕೆಯ ಮನೆಯವರನ್ನು ಥಳಿಸಿದ್ದಾರೆ. ಇದು ಮಾನವ ಹಕ್ಕುಗಳ ಸ್ಪಷ್ಟ ಉಲ್ಲಂಘನೆ. ಮಾನವೀಯತೆಯುಳ್ಳವರೆಲ್ಲಾ ತಲೆತಗ್ಗಿಸುವಂತಹ ಘಟನೆ. ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ತಪ್ಪಿತಸ್ಥರಿಗೆ ಶಿಕ್ಷೆಯಾಗಬೇಕು. ನೊಂದವರಿಗೆ ಸಂವಿಧಾನದ ರಕ್ಷಣೆ ದೊರೆಯಬೇಕು ಎಂದು ಅಚಲ ಒತ್ತಾಯಿಸುತ್ತದೆ.

# ಪತ್ರಕರ್ತೆಗಾದ ಅನ್ಯಾಯದ ವಿರುದ್ಧ ಪ್ರತಿಭಟನೆ

ಕನ್ನಡ ಪತ್ರಿಕೋದ್ಯಮ ಇತಿಹಾಸದಲ್ಲಿ ತನ್ನದೇ ಛಾಪು ಮೂಡಿಸಿರುವ 'ಸಂಯುಕ್ತ ಕರ್ನಾಟಕ' ದಿನ ಪತ್ರಿಕೆ ಇಂದಿಗೂ ಕರ್ನಾಟಕದ ಕನ್ನಡ ಪತ್ರಿಕೆಗಳಲ್ಲಿ ತನ್ನದೇ ಸ್ಥಾನ ಉಳಿಸಿಕೊಂಡಿದೆ. ಅದೇ ಪತ್ರಿಕೆಯ ಉಪಸಂಪಾದಕಿ ಶಾಂತಕುಮಾರಿ ಅವರು ಅದರ ಈಗಿನ ವ್ಯವಸ್ಥಾಪಕ ಸಂಪಾದಕ ಶ್ರೀ ಕೆ. ಶಾಮರಾವ್ ಅವರ ದರ್ಪ ಆಡಳಿತದ ವಿರುದ್ಧ ಸೆಟೆದು ನಿಲ್ಲಬೇಕಾದುದು ವಿಪರ್ಯಾಸವೇ ಸರಿ. ಆದರೆ ಈ ಹೋರಾಟ ಪತ್ರಿಕೆ ವಿರುದ್ಧ ಅಲ್ಲ. ಒಬ್ಬ ವ್ಯಕ್ತಿಯ ಆಡಳಿತ ವ್ಯವಸ್ಥೆಯ ವಿರುದ್ಧ ಎಂದು ಸಾರಿರುವುದು ಆರೋಗ್ಯಕರ. ಕಾರ್ಯನಿರತ ಪತ್ರಕರ್ತೆ ಶಾಂತಕುಮಾರಿ 'ಸಂಯುಕ್ತ ಕರ್ನಾಟಕ'ದಲ್ಲಿ ಉಪಸಂಪಾದಕಿಯಾಗಿದ್ದರು. ಕೆಲಸ ಕಾಯಂ ಆದ ಒಂದೇ ವಾರದಲ್ಲಿ ಅವರನ್ನು ಕೆಲಸದಿಂದ ವಜಾಮಾಡಲಾಯಿತು. ಶಾಂತಕುಮಾರಿಗಾದ ಅನ್ಯಾಯದ ವಿರುದ್ಧ ಮಹಿಳಾ ಪತ್ರಕರ್ತರ ವೇದಿಕೆ ಸೆಪ್ಟೆಂಬರ್ 27 ರಂದು ಬೆಂಗಳೂರಿನ ಮಹಾತ್ಮಗಾಂಧೀ ಪ್ರತಿಮೆ ಎದುರು ಸಂಘಟಿಸಿದ್ದ ಪ್ರತಿಭಟನಾ ಪ್ರದರ್ಶನ ಮತ್ತು ಧರಣಿ ಸತ್ಯಾಗ್ರಹದಲ್ಲಿ ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಜನವಾದಿ ಮಹಿಳಾ ಸಂಘಟನೆ, ವಿಮೋಚನಾ, ದಲಿತ ಸಂಘರ್ಷ ಸಮಿತಿ, ಎಸ್.ಎಫ್.ಐ.. ಮುಂತಾದ ಹಲವಾರು ಸಂಘಟನೆಗಳು ಪಾಲ್ಗೊಂಡಿದ್ದವು. ಜೊತೆಗೆ ಅನೇಕ ಪ್ರಗತಿಪರ ಚಿಂತಕರೂ ಇದರಲ್ಲಿ ಭಾಗವಹಿಸಿದ್ದರು.

ವಿದ್ಯಾರ್ಥಿ ದೆಸೆಯಲ್ಲಿಯೇ ಎಸ್.ಎಫ್.ಐ. ಸಂಘಟಕಿಯಾಗಿದ್ದ ಶಾಂತಕುಮಾರಿ ಸಂಘಟನೆಯಲ್ಲಿಯೇ ಬೆಳೆದು ಬಂದವರು. 'ಇಪ್ಪತ್ತು ವರ್ಷಗಳಿಂದ ಸಂಘಟನೆಯ ಹೋರಾಟದಲ್ಲಿ ನಿರತಳಾಗಿ ಯಾರಿಂದಲೂ ಒಂದು ಮಾತೂ ಕೇಳದ ನನಗೆ ಶಾಮರಾಯರು 'ನಡತೆಗೆಟ್ಟವಳು' ಅಂತ ಹೇಳಿ, ನನ್ನ ಹಿಂದೆ ಸೆಕ್ಯುರಿಟಿ ಗಾರ್ಡ್‌ಗಳನ್ನು ಬಿಟ್ಟಿದ್ದಾರೆ. ನಾನು ಸುಮ್ಮನೆ ಕೈಕಟ್ಟಿ ಕುಳಿತುಕೊಳ್ಳಲೇ ? ನನ್ನ ಕೆಲಸ ಇಷ್ಟವಿಲ್ಲದಿದ್ದರೆ ಸುಮ್ಮನೇ ಡಿಸ್‌ಮಿಸ್ ಮಾಡಿದ್ರೆ ನಾನು ಮಾತಾಡದೇ ಹೊರಟು ಹೋಗುತ್ತಿದ್ದೆ. ಜಗತ್ತು ವಿಶಾಲವಾಗಿದೆ. ಎಲ್ಲಾದರೂ ಬದುಕಬಹುದು. ಆದರೆ ನನಗಿಂತ ಕಿರಿಯ ಸಹೋದ್ಯೋಗಿಯಿಂದ ಕೆನ್ನೆಗೆ ಹೊಡೆಸ್ಸಿದರು. ಇಂಥ ಅವಮಾನ ಮಾಡಿ ಕಳುಹಿಸಿದ ಶ್ರೀ ಶಾಮರಾಯರಿಗೆ ಅವರು ಮಾಡಿದ ತಪ್ಪನ್ನು ತಿಳಿಸಿಕೊಡದೇ ಇದ್ದರೆ ಹೇಗೆ ? ಸಮಾಜದ ಅತ್ಯಂತ ಕೆಳಸ್ತರದಿಂದ ಬಂದ, ಶೋಷಿತ ವರ್ಗಕ್ಕೆ ಸೇರಿದ ನನ್ನ ತಂದೆ ತಾಯಿ ಎಂತಹ ಕಷ್ಟಕಾಲದಲ್ಲಿಯೂ ಧೃತಿಗೆಡದೆ ನಮ್ಮನ್ನು ಸಾಕಿ ಬೆಳೆಸಿ ಓದಿಸಿದರು. ನಮ್ಮ ತಾಯಿ ಕೂಡ ನನಗೆ ಒಂದು ದಿನ ಏಟು ಹಾಕಿಲ್ಲ. ಅಂತಹದರಲ್ಲಿ ಶಾಮರಾಯರು ನನಗೆ ಯಾಕೆ ಕೆನ್ನೆಗೆ ಹೊಡೆಸಬೇಕು? ನನ್ನ ನಡತೆಯ ಬಗ್ಗೆ ಹೀನ ಮಾತು ಆಡಬೇಕು? ನಾವು ಇದ್ದುದ್ದರಲ್ಲಿ ನೆಮ್ಮದಿಯಿಂದ ಇದ್ದೇವೆ. ಯಾವ ರೀತಿಯ ವೈಭೋಗಕ್ಕೆ ಆಸೆ ಪಟ್ಟಿಲ್ಲ. ಮಕ್ಕಳನ್ನು ನಿಯತ್ತಿನಿಂದ ಸಾಕುತ್ತಿದ್ದೇನೆ. ನನಗಾದ ಅನ್ಯಾಯವನ್ನು ಶಾಮರಾಯರು ಹೇಗೆ ತುಂಬಿಕೊಡುತ್ತಾರೆ...?' ಎಂದು ಶಾಂತಕುಮಾರಿ ತಮಗಾಗಿರುವ ಅನ್ಯಾಯವನ್ನು ವಿವರಿಸಿದರು.

ಮಹಿಳಾ ಪತ್ರಕರ್ತರ ವೇದಿಕೆಯ ನಾಗಲಕ್ಷ್ಮಿಯವರು ಮಾತನಾಡಿ, 'ಶಾಂತಕುಮಾರಿಗೆ ಮೊದಲು ದಕ್ಷ ಕೆಲಸಗಾರ್ತಿ ಎಂದು ಕೆಲಸ ಕಾಯಂ ಮಾಡಿ ಒಂದೇ ವಾರದಲ್ಲಿ ವಜಾ ಮಾಡಿದುದರ ದುರುದ್ದೇಶವೇನು? ನಮ್ಮ ಈ ಹೋರಾಟ ಇಂಥ ದರ್ಪ ಆಡಳಿತದ ಚುಕ್ಕಾಣಿ ಹಿಡಿದಿರುವ 'ಸಂಯುಕ್ತ ಕರ್ನಾಟಕ'ದ ವ್ಯವಸ್ಥಾಪಕ ಸಂಪಾದಕ ಶಾಮರಾವ್ ಅವರ ವರ್ತನೆ ವಿರುದ್ಧ ಮಾತ್ರ. ಕನ್ನಡ ಪತ್ರಿಕೋದ್ಯಮದ 'ಪಿತಾಮಹ' ಎನಿಸಿಕೊಂಡಿರುವ 'ಸಂಯುಕ್ತ ಕರ್ನಾಟಕ' ವಿರುದ್ಧ ಅಲ್ಲ ಎಂದು ಸ್ಪಷ್ಟಪಡಿಸಿದರು.

ಕಾರ್ಯನಿರತ ಪತ್ರಕರ್ತರ ಸಂಘದ ಮಲ್ಲಿಕಾರ್ಜುನಯ್ಯ, ಜಿ.ಕೆ. ಸತ್ಯ, ಸಿಪಿಎಂ. ಧುರೀಣ ಸೂರಿ ಮುಂತಾದವರು ಮಾತನಾಡಿ ಶಾಮರಾಯರ ಕ್ರಮವನ್ನು ಖಂಡಿಸಿದರು. 'ಸಂಯುಕ್ತ ಕರ್ನಾಟಕ'ದಲ್ಲಿ ಕೆಲಸ ಮಾಡುತ್ತಿದ್ದ, ಈಗ 'ಹಿಂದೂ' ಪತ್ರಿಕೆಯಲ್ಲಿ ವರದಿಗಾರರಾಗಿರುವ ರಂಗಣ್ಣ ಅವರು 'ಸಂಯುಕ್ತ ಕರ್ನಾಟಕ' ಕಚೇರಿ ಒಳಗೆ ಇರುವ ಅವ್ಯವಸ್ಥೆಯನ್ನು ವಿವರಿಸಿದರು. 'ಹೊಸತು' ಪತ್ರಿಕೆಯ ಸಂಪಾದಕ ಡಾ|| ಜಿ. ರಾಮಕೃಷ್ಣ ಅವರು "ಇದು ಒಬ್ಬ ವ್ಯಕ್ತಿಗಾದ ಅವಮಾನವಲ್ಲ. ಇಂಥ ಅನ್ಯಾಯಗಳ ವಿರುದ್ಧ ಪ್ರತಿಭಟಿಸಲೇ ಬೇಕು. ಇಂಥ ವ್ಯವಸ್ಥೆ ವಿರುದ್ಧ ಸಂಘಟಿತ ಹೋರಾಟ ಅಗತ್ಯ. ಎಂದರು.

'ಸಂಯುಕ್ತ ಕರ್ನಾಟಕ' ಕಚೇರಿಗೆ ಮೆರವಣಿಗೆಯಲ್ಲಿ ತೆರಳಿ, ಅಲ್ಲಿ ಪ್ರತಿಭಟನ ಸೂಚಿಸಬೇಕೆಂದಿದ್ದ ಪ್ರಯತ್ನ ಸಫಲವಾಗಲಿಲ್ಲ. 'ಸಂಯುಕ್ತ ಕರ್ನಾಟಕ'ದ ಮುಂದೆ ಪ್ರತಿಬಂಧಕಾಜ್ಞೆಯನ್ನು ಜಾರಿಗೊಳಿಸಲಾಗಿತ್ತು !

ಶಾಮರಾವ್ ಅವರು ಶಾಂತಕುಮಾರಿ ಬಳಿ ಕ್ಷಮೆ ಯಾಚಿಸಬೇಕು. ಆಕೆಗೆ ಗೌರವ ಪೂರ್ವಕವಾಗಿ ಉಪಸಂಪಾದಕಿಯಾಗಿ ಪುನಃ ನೇಮಿಸಿಕೊಳ್ಳಬೇಕು ಹಾಗೂ ಶಾಮರಾವ್ ಅವರು ಲೋಕಶಿಕ್ಷಣ ಟ್ರಸ್ಟ್ ಮತ್ತು ಅದರ ಪ್ರಕಟಣೆಗಳ ಕಾರ್ಯದರ್ಶಿ ಹಾಗೂ ವ್ಯವಸ್ಥಾಪಕ ಸಂಪಾದಕ ಸ್ಥಾನದಿಂದ ಕೆಳಗಿಳಿಯಬೇಕು. ಇವು ಪ್ರಮುಖ ಬೇಡಿಕೆಗಳೆಂದು ಸಭೆಯಲ್ಲಿ ಸಾರಲಾಯಿತು.

ದೇವಿ.

ವ್ಯಕ್ತಿ ವಿಶೇಷ

# ಕಂಡಕ್ಟರ್ ಭಾಗ್ಯ

ನನಗೆ ಈ ಮಹಿಳೆಯ ಪರಿಚಯವಾದದ್ದು. ಕೆಲಸದ ನಿಮಿತ್ತ. ನಾನು. ಮೆಜೆಸ್ಟಿಕ್‌ನಿಂದ ಕತ್ರಗುಪ್ಪೆಯವರೆಗೆ ಅನೇಕ ಬಾರಿ ಪ್ರಯಾಣ ಮಾಡಬೇಕಾಗಿ ಬಂದಾಗ. ಆಕೆಯನ್ನು ನಾನು ಬಹಳಷ್ಟು ಗಮನಿಸಿದೆ. ನಗರ ಸಾರಿಗೆಯ ಮಾರ್ಗದರ್ಶಕಿಯಾಗಿರುವ ಈ ಮಹಿಳೆಯ ಕಾರ್ಯನಿರ್ವಹಣೆಯಲ್ಲಿ ಬಹಳಷ್ಟು ವೈಶಿಷ್ಟ್ಯವನ್ನು ಕಂಡೆ. ಈಕೆಯೇ ಕಂಡಕ್ಟರ್ ಭಾಗ್ಯ

ಹುಟ್ಟಿದ್ದು. ಬಾಲ್ಯ ಕಳೆದದ್ದು. ಓದಿದ್ದು ಎಲ್ಲಾ ಚಾಮರಾಜಪೇಟೆ. ಬೆಂಗಳೂರಿನ ಬಡಾವಣೆಯಲ್ಲಿ. ಓದಿನಲ್ಲಿ ಮುಂಚಿನಿಂದಲೂ ಚುರುಕು. ಮನೆಯ ಸ್ಥಿತಿ ಬಡತನದ್ದಾಗಿತ್ತು. ಈಕೆಯೇ ಮನೆಯ ಹಿರಿಯವಳು. 5 ಜನ ತಂಗಿಯರು. ಇಬ್ಬರು ತಮ್ಮಂದಿರು. ಎಸ್.ಎಸ್.ಎಲ್.ಸಿ. ಯಲ್ಲಿ ಹೆಚ್ಚಿನ ಅಂಕ ಪಡೆದು ಪ್ರಥಮ ಶ್ರೇಣಿಯಲ್ಲಿ ಭಾಗ್ಯ ಪಾಸಾದಾಗ ಅದನ್ನು ಪ್ರೋತ್ಸಾಹಿಸಿ ಹಿರಿಹಿಗ್ಗುವ ಸ್ಥಿತಿ ಮನೆಯವರಿಗೆ ಇರಲಿಲ್ಲ.

ಆಕೆಯ ಓದು ಅಲ್ಲಿಗೇ ನಿಂತಿತು. ಶಾಲೆಯವರು ಎಷ್ಟೇ ಹೇಳಿಕಳಿಸಿದರೂ. ಮನೆಯವರಿಗೆ ಅವಳ ಓದಿನ ಬಗ್ಗೆ ಆಸಕ್ತಿ ಇರಲಿಲ್ಲ. ಕಾಲೇಜಿಗೆ ಆಕೆಯನ್ನು ಸೇರಿಸಿ ನಿಭಾಯಿಸುವ ಶಕ್ತಿ ಅವಳ ತಂದೆಗೆ ಇರಲಿಲ್ಲ. ಮನಸ್ಸಿಗೂ ಬೇಕಿರಲಿಲ್ಲ. ಕೊರಗಿದವಳೆಂದರೇ ಆಕೆ. ಅದೇ ಆ ಬಾಲೆ ಭಾಗ್ಯ. ಭಾಗ್ಯಲಕ್ಷ್ಮಿ. ವ್ಯಾಸಂಗವನ್ನು ನಿಲ್ಲಿಸಿ. 16ನೇ ವಯಸ್ಸಿಗೆ ಅವಳ ಮದುವೆಯನ್ನೂ ಮಾಡಿ ಮುಗಿಸಿ ತಂದೆ ಧನ್ಯರಾದರು. ಗಂಡ ನಗರ ಸಾರಿಗೆಯಲ್ಲಿ ಕೆಲಸದಲ್ಲಿದ್ದ ಸುಬ್ಬಣ್ಣ ಅವರು.

ಬೆಂಗಳೂರಿನಲ್ಲಿ ಒಂದಷ್ಟು ವರ್ಷ ಸಂಸಾರ ಮಾಡಿದ್ದಾಯ್ತು. ನಂತರ ಭಾಗ್ಯ ಸೋಲೂರು ಹಳ್ಳಿ ಮನೆಗೆ ಒಟ್ಟು ಕುಟುಂಬದಲ್ಲಿ ಬಾಳಲು ತೆರಳಬೇಕಾಯ್ತು. ಹಿರಿಯರಾದ ಗಂಡನ ಅಣ್ಣ-ಅತ್ತಿಗೆಯರ ಸಂಪ್ರದಾಯ. ಮಡಿ. ಇತ್ಯಾದಿ ಕಟ್ಟುನಿಟ್ಟಿನಲ್ಲಿ ಭಾಗ್ಯಳ ಉತ್ಸಾಹದ ಬುಗ್ಗೆ ಬತ್ತಿಯೇ ಹೋಯಿತು. "ಇದೊಂದು ಜೀವ ನಾನ? ನನ್ನದೊಂದು ಬಾಳಾ?" ಎನ್ನುತ್ತಿದ್ದರು. ಬೆಂಗಳೂರಿನಲ್ಲಿದ್ದಾಗ. ಅಕ್ಕಪಕ್ಕದ ಮಕ್ಕಳಿಗೆ ಪಾಠ ಹೇಳುತ್ತಿದ್ದರು. ಸೀರೆಗಳಿಗೆ ಅಂಚನ್ನು ಹೊಲಿದುಕೊಡುತ್ತಿದ್ದರು. ಆ ಹಳ್ಳಿಯಲ್ಲಿ ಯಾವುದಕ್ಕೂ ಅವಕಾಶವಿರಲಿಲ್ಲ ಭಾಗ್ಯಳಿಗೆ. ಬೇಸರಕ್ಕೆ ಮತ್ತೂ ಮುಖ್ಯಕಾರಣ. ವರ್ಷಗಳೇ ಕಳೆದರೂ. ಎಷ್ಟೇ ಹಂಬಲಿಸಿ. ದೇವರು ದಿಂಡರೆಂದು ಮಾಡಿದರೂ. ಮಕ್ಕಳೇ ಆಗದಿದ್ದುದ್ದು. ಭಾವನವರಿಗೂ ಮಕ್ಕಳಿರಲಿಲ್ಲ. ಭಾಗ್ಯಳ ಮನಸ್ಸಂತು ಪಂಜರದಲ್ಲಿನ ಗಿಣಿಯಂತೆ ಚಟಪಟಗುಟ್ಟುತ್ತಿತ್ತು.

ದೇವರು-ದಿಂಡರು ಪ್ರಯೋಜನಕ್ಕೆ ಬರಲಿಲ್ಲ. ವೈದ್ಯರನ್ನಾದರೂ ಕಾಣುವ ಎಂದರೆ. ಪತಿರಾಯ ಡಾಕ್ಟರ ಬಳಿ ಹೋಗಲು ಒಪ್ಪಲೇ ಇಲ್ಲ. ವಿಜ್ಞಾನ ಇಷ್ಟೊಂದು ಪ್ರಗತಿ ಸಾಧಿಸುತ್ತಿರುವಾಗ. ತನಗೊಂದು ಮಗು ಆಗಲಾರದೇ? ತನಗೊಂದು ಬೇಕೆ ಬೇಕೆಂದು ಬಹಳ ಹಂಬಲ ತೊಟ್ಟ ಭಾಗ್ಯ. ಈ ದಿಶೆಯಲ್ಲಿ ನೆರವು ನೀಡುವ ನರ್ಸಿಂಗ್ ಹೋಮ್‌ಗೆ ಬಹಳ ಬಾರಿ ಹೋಗಿ ಬಂದಳು. ಗಂಡನಿಗೆ ಕೆಲಸ ಸಂಬಳವಲ್ಲದೆ. ಮನೆ. ಹೊಲ-ಗದ್ದೆಯೆಂದು ಸಾಕಷ್ಟು ಆಸ್ತಿ ಇತ್ತು. ಆದ್ದರಿಂದ ಸಂತಾನಕ್ಕಾಗಿ ತಗಲುವ ಲಕ್ಷಾಂತರ ರೂ.ಗಳ ಖರ್ಚಿಗಾಗಿಯೂ ಭಾಗ್ಯ ಸಿದ್ಧಳಾದಳು. ಆದರೆ....?

ಆದರೆ ಒಂದು ಸಂಜೆ ಕೆಲಸದಿಂದ ಮರಳಿದ ಗಂಡ ಅಸ್ವಸ್ಥಗೊಂಡು ಆಸ್ಪತ್ರೆ ಸೇರಿದಾಗ ಮನೆಗೆ ಮರಳಲಿಲ್ಲ. ಮರಣವನ್ನಪ್ಪಿದ. ಭಾಗ್ಯ ಮಗುವಿಗಾಗಿ ನಡೆಸಿದ ಓಡಾಟ ನಿಂತೇ ಹೋಯಿತು. ನಗರ ಸಾರಿಗೆಯಿಂದ ಗಂಡನ ಪರವಾಗಿ ತನಗೆ ಬರಬೇಕಾಗಿದ್ದ. ಹಣಕ್ಕಾಗಿ ಪರದಾಟ. ಓಡಾಟ ಶುರುವಾಯಿತು. ಈ ದಿಶೆಯಲ್ಲಿ ತಾಯಿ ಮನೆಯವರು ಬಹಳವಾಗಿ ನೆರವಾದರು. ತಂದೆ ಗತಿಸಿ ಬಹಳ ಕಾಲವಾಗಿತ್ತು. ಬೆಂಗಳೂರು ನಗರ ಸಾರಿಗೆಯಲ್ಲಿ ಭಾಗ್ಯಳಿಗೆ ಉದ್ಯೋಗದ ಅವಕಾಶವೂ ಸಿಕ್ಕಿತು. ಆಕೆಯ ವಯಸ್ಸು ನಾಲ್ಕುದಶಕಗಳನ್ನೂ ದಾಟಿ ಮುಂದುವರಿದಿತ್ತು. ಗಂಡ ಸಾಯುವುದಕ್ಕೆ ವರ್ಷದ ಮುಂಚೆ ಭಾವನವರೂ ತೀರಿಕೊಂಡಿದ್ದರು.

ಆದರೆ ಭಾಗ್ಯ ಉದ್ಯೋಗಸ್ಥೆಯಾಗುವುದು ಒಡಹುಟ್ಟಿದವರಿಗೆ ಸುತರಾಂ ಇಷ್ಟವಾಗಲಿಲ್ಲ. "ಅವಳು ಯಾಕೆ ದುಡಿಯಬೇಕು? ಬೇಕಾದಷ್ಟು ಹಣ. ಆಸ್ತಿ ಇದೆಯುಲ್ಲಾ. ಮಕ್ಕಳು ಬೇರೆ ಇಲ್ಲ" ಎಂದು ಒಡಹುಟ್ಟಿದವರ ವಿಚಾರ ಧಾರೆ. ಆದರೆ ನಾನು ಹಾರಲಾರನೇನೋ ಎಂದು ಭಾವಿಸಿದ್ದ ಈ ಭಾಗ್ಯವೆಂಬ ಪಕ್ಷಿ. ಮುದಡಿ ಹೋಗಿದ್ದ ತನ್ನ ರೆಕ್ಕೆಗಳನ್ನು ಬಲವಂತವಾಗಿ ಬಿಚ್ಚಿ. ಹರಡಿ ಹಾರಲು ಸಿದ್ಧವಾಯಿತು. "16ನೇ ವಯಸ್ಸಿನಲ್ಲೇ ಈ ಬುದ್ಧಿ. ಧೈರ್ಯ ನನಗಿರುತ್ತಿದ್ದರೆ" ಎನ್ನುತ್ತಾರೆ ಭಾಗ್ಯ. ಭಾಗ್ಯ ಕೆಲಸಕ್ಕೆ ಸೇರಿದರು. ತಮ್ಮನ ಸಂಸಾರದಲ್ಲಿ ಒಬ್ಬರಾಗಲು ಇಷ್ಟಪಡದೆ. ಬೇರೆ ತನ್ನದೇ ಆದ ಮನೆಯೊಂದನ್ನು ಪಡೆದು. ವೃದ್ಧ ತಾಯಿಯನ್ನು. ತಮ್ಮನ ಹೆಣ್ಣು ಮಗುವನ್ನು ತನ್ನ ಬಳಿ ಇರಿಸಿಕೊಂಡರು.

ಮುಖ್ಯವಾಗಿ ನಾನು ಗಮನಿಸಿದ್ದು. ಈಕೆ ಬಸ್ಸಿನಲ್ಲಿದ್ದರೆ. ಈ ಬಸ್ಸಿಗಾಗಿ ಕಾದಿರುವ ಮಹಿಳೆಯರ ಮುಖ ಅರಳುತ್ತದೆ. ಪ್ರತಿ ನಿಲ್ದಾಣದಲ್ಲೂ ಬಸ್ಸಿನಲ್ಲಿ ಎಲ್ಲೇ ಇರಲಿ. ಬಸ್ಸು ಸ್ಟಾಪ್‌ನಲ್ಲಿ ನಿಂತ ತಕ್ಷಣ. ಅಷ್ಟೇ ಚುರುಕಾಗಿ ಭಾಗ್ಯ ಕಂಡಕ್ಟರ್. ಮಹಿಳೆಯರು ಹತ್ತುವ ಬಸ್ಸಿನ ಮುಂಭಾಗದ ದ್ವಾರದಲ್ಲಿ ನಿಲ್ಲುತ್ತಾರೆ. "ಬನ್ನೀಮ್ಮಾ. ಬನ್ನಿ". ನಿಧಾನಕ್ಕೆ ಹತ್ತಿ ಅಮ್ಮ. ಆಕೆಯ ಸಾಮಾನನ್ನು ತೂಗೋಳಿಮ್ಮ ಯಾರಾದರು. ಆಕೆಗೆ ಕೈಲಾಗೋಲ್ಲ. ಮಗೂನ ಇಲ್ಲಿ ಕೊಡೀಮ್ಮ. ಹತ್ತಿ ನೀವು. ಈಗ ತೂಗೋಳಿ ಮಗೂನ" ಹೀಗೆ ನಗು-ನಗುತ್ತಾ ಮಹಿಳೆಯರನ್ನು ಭಾಗ್ಯ ಸ್ವಾಗತಿಸುತ್ತಾರೆ. ಅವರನ್ನು ಹತ್ತಿಸಿಕೊಳ್ಳುವ ಕೆಲಸವನ್ನು ಚುರುಕಾಗಿ ಮಾಡಿ ಮುಗಿಸುತ್ತಾರೆ. ಮನೆಗೆ ಬಂದವರನ್ನು ಇಷ್ಟೊಂದು ಉತ್ಸಾಹದಿಂದ ಶ್ರದ್ಧೆಯಿಂದ. ನಾವು ಸ್ವಾಗತಿಸುವುದಿಲ್ಲವೇನೋ ಎಂಬ ಅನುಮಾನ ನನ್ನಲ್ಲಿ ತಲೆದೋರುತ್ತೆ. ಇಷ್ಟರ ಮಧ್ಯೆ ಬಸ್ಸನ್ನು ಹತ್ತಿಸಿಕೊಳ್ಳುವಾಗಲೇ. ಕಣ್ಣಿನಿಂದಲೇ ಆ ಪ್ರಯಾಣಿಕರ ಸಂಖ್ಯೆಯನ್ನು ಲೆಕ್ಕ ಹಾಕಿರುತ್ತಾರೆ ಭಾಗ್ಯ. ಸೀಟಿ ಊದಿ. ಮುಂದಿನ ಬಾಗಿಲಿನಿಂದ ಕ್ಷಣದಲ್ಲಿ ಒಳಸರಿದು ಬರುತ್ತಾರೆ ಆಕೆ. ಮುಂದಿನ ನಿಲ್ದಾಣ ಬಸ್ಸು ತಲುಪುವಷ್ಟರಲ್ಲಿ ಎಲ್ಲರಿಗೂ ಟಿಕೆಟ್ಟನ್ನು ಕೊಟ್ಟು ಮುಗಿಸಿರುತ್ತಾರೆ. ಬೇಸಗೆಯಲ್ಲೂ ಮುಖಬಾಡಿ. ದೇಹಸೋತಿದ್ದರೂ. ಮುಖದಲ್ಲಿ ಚುರುಕುತನ. ಮಂದಹಾಸ ಮರೆಯಾಗಿರುವುದಿಲ್ಲ. ಈಕೆಗೆ ನಿಜವಾಗಲೂ 40ರ ಮೇಲೆ ವಯಸ್ಸಾಗಿದೆಯಾ? ಎನಿಸುತ್ತದೆ. ಉಡುಗೆ-ತೊಡುಗೆ. ಜಡೆ ಮುಡಿಯಲ್ಲೂ ಅಷ್ಟೇ ಶಿಸ್ತು. ಅಷ್ಟೇ ಶುಭ್ರತೆ ಆಕೆಯದು.

ಇಷ್ಟಾಯಿತಲ್ಲ. ಆಕೆಗೆ ಸರ್ವಿಸ್ ಎಷ್ಟಾಯಿತೆಂದು ಕೇಳಿ. ಕೇವಲ ಎರಡು ವರ್ಷ. ಅದಕ್ಕಿಂತ ಹೆಚ್ಚಾಗಿಲ್ಲ. ಮೇಲಧಿಕಾರಿಯವರು ಈಗಾಗಲೇ ಈಕೆಯ ಕೆಲಸದ ಬಗ್ಗೆ ಬಹಳ ಮೆಚ್ಚುಗೆ ವ್ಯಕ್ತಪಡಿಸಿದ್ದಾರಂತೆ. ಈಕೆ ಇರುವ ಬಸ್ಸಿನಲ್ಲಿ ಕಲೆಕ್ಷನ್ ಹೆಚ್ಚಾಗಿರುತ್ತದಂತೆ.

ನಾವು ಎಲ್ಲೇ ಇರಲಿ. ನಮ್ಮ ವಿದ್ಯಾರ್ಹತೆ ಎಷ್ಟೇ ಇರಲಿ. ನಾವು ಎಲ್ಲೇ ಕೆಲಸ ಮಾಡಲಿ. ಭಾಗ್ಯಳಂತೆ ಇರಲು ಯತ್ನಿಸೋಣ. ಸುತ್ತಮುತ್ತಲಿನವರು. ನೆಂಟರು ಇಷ್ಟರು ಆಕೆಯ ಉಡಿಗೆ-ನಡಿಗೆಯಲ್ಲಿರುವ ಶಿಸ್ತನ್ನು ಆಡಿಕೊಳ್ಳದೆ. ಆಕೆಯನ್ನು ಹೀಯಾಳಿಸದೇ ಬಿಟ್ಟಿಲ್ಲ. ಹೌದು ಆಕೆ ಪುರುಷಚಾಲಕ ಮಾರ್ಗದರ್ಶಕರ ನಡುವೆ. ಅವರೊಂದಿಗೆ ಸಹಕರಿಸುತ್ತಾ ಕೆಲಸ ಮಾಡಬೇಕಾಗುತ್ತದೆ. ಅದಕ್ಕೆ ಮನೆಯವರ ಆಕ್ಷೇಪಣೆ ಇದ್ದೇ ಇದೆ. "ನಾನೇನೂ ಆಗೋಲ್ಲ. ಹೆದರಿಕೋಬೇಡಿ" ಎನ್ನುತ್ತಾರೆ ಆಕೆ. ತಾನು ಹಣವಂತೆಯಾದರೂ "ನಾನು ಹಣಕ್ಕಾಗಿ ಅಲ್ಲ. ನನಗೆ ಮಾಡೋದಕ್ಕೆ ಏನಾದರೂ ಕೆಲಸಬೇಕು" ಎಂದು ಈ ಸಣ್ಣ ಉದ್ಯೋಗವನ್ನು ಸಂತೋಷದಿಂದ ಹಿರಿದಾಗಿ. ಆತ್ಮವಿಶ್ವಾಸದಿಂದ ನಡೆಸುತ್ತಿದ್ದಾರೆ. ಕೆಲಸ ಮಾಡೋದಕ್ಕೆ ಅಂತಸ್ಥೇನು? ಅದರಲ್ಲಿ ಅವಮಾನ ಅಂದರೇನು"? ಎಂದು. (ಹೀಗೆ ಹೇಳಿದವರಿಗೆ "ಆರಾಮವಾಗಿ ಉಟ್ಕೊಂಡು ಮನೆಯಲ್ಲಿರಬಾರದೆ") ಉತ್ತರ ಕೊಡುತ್ತಾರೆ ಭಾಗ್ಯ. ಇಷ್ಟಾಯಿತು. ಆಕೆ ಯಾವ ನೆಂಟ ಇಷ್ಟರ ಮನೆಗಳಿಗೆ ಹೋಗಿ ತಲೆ ಬಿಸಿ ಮಾಡಿಕೊಳ್ಳಲು ಇಷ್ಟಪಡುವುದಿಲ್ಲ. ಸಹಗಮನ ಪದ್ಧತಿ (ಸತಿ ಪದ್ಧತಿ). ಮರುಕಳಿಸಲು ಹವಣಿಕೆ ನಡೆದಿದೆ ಎಂಬ ಕೂಗು ಎದ್ದಿರುವಾಗ. ಭಾಗ್ಯಳಂತೆ ದಿಟ್ಟತನ. ನೇರ-ನುಡಿ-ಹೆಜ್ಜೆ. ನಮ್ಮಲ್ಲಿ ಅನೇಕರಿಗೆ ಸ್ಫೂರ್ತಿದಾಯಕವಾಗಬಲ್ಲದು. ಸರಿದಾರಿಯಲ್ಲಿ ಹೆಜ್ಜೆ ಹಾಕುವಾಗ ಯಾರಿಗೂ ಅಂಜಬೇಕಾಗಿಲ್ಲ. ನಮ್ಮ ಜೀವನವನ್ನು ನಾವೇ ರೂಪಿಸಿಕೊಳ್ಳಲು ಕಲಿಯಬೇಕು ಭಾಗ್ಯಳಂತೆ ಅಲ್ಲವೇ ?

- ಬಿ. ವಿ. ಸುಭದ್ರಾ

# ಒಂದು ಮಹತ್ವದ ತೀರ್ಪು

'ಎಲ್ಲರೂ ಸಮಾನರು' ಎನ್ನುತ್ತದೆ ನಮ್ಮ ಸಂವಿಧಾನ. ಆದರೆ ನಮ್ಮ ದೇಶದಲ್ಲಿ ಅದೆಷ್ಟು ಲಿಂಗತಾರತಮ್ಯದ ಕಾನೂನುಗಳು ಇವೆ ಗೊತ್ತೆ? ಮದುವೆ, ವಿಚ್ಛೇದನ, ಆಸ್ತಿಹಕ್ಕು, ಬಲಾತ್ಕಾರ ಇಂಥಾ ಹತ್ತು ಹಲವು ವಿಷಯಗಳಲ್ಲಿದ್ದ ನ್ಯೂನತೆಗಳನ್ನು, ಲಿಂಗಭೇದದ ರೀತಿಗಳನ್ನು ಇತ್ತೀಚಿನ ದಶಕಗಳಲ್ಲಿ ಮಹಿಳೆಯರು ಗುರುತಿಸಿ, ಸಂಘ-ಸಂಸ್ಥೆಗಳ ಮೂಲಕ ಸಂಘಟಿಸಿ ಹೋರಾಡಿದ್ದಾರೆ. ಈ ಮೂಲಕ ಸಂಬಂಧಿತ ಕಾನೂನಿನಲ್ಲಿ ಮಹತ್ವದ ತಿದ್ದುಪಡಿ ಆಗುವಂತೆ ಮಾಡಿದ್ದಾರೆ. ಆದರೂ ತಿದ್ದುಪಡಿಯಾಗಬೇಕಾದ ಕಾನೂನುಗಳು ಇನ್ನೂ ಬಹಳಷ್ಟಿವೆ.

'ಮಾತೃದೇವೋಭವ' ಎನ್ನುವ ನಾಡಿನಲ್ಲಿ, ಕಾನೂನಿನ ಕಣ್ಣಿನಲ್ಲಿ ತಾಯಿ ತನ್ನ ಮಗುವಿನ 'ಸಹಜ ಪಾಲಕ'ಳಲ್ಲ ಎನ್ನುವುದು ನಿಮಗೆ ತಿಳಿದಿತ್ತೆ? ಹೆಣ್ಣನ್ನು, ಹೆಣ್ತನವನ್ನು ಅವಳ 'ಹೆರುವ ಮತ್ತು ಮಕ್ಕಳನ್ನು ಪಾಲಿಸುವ' ಪ್ರಮುಖ ಪಾತ್ರದಲ್ಲಿಯೇ ಸದಾ ಗುರುತಿಸುವ ನಮ್ಮ ಸಮಾಜದಲ್ಲಿ, ಹೆಣ್ಣು ತನ್ನ ಅಪ್ರಾಪ್ತ ವಯಸ್ಸಿನ ಮಗುವಿನ 'ಸಹಜ ಪಾಲಕ'ಳಾಗಲು ಸಾಧ್ಯವಿಲ್ಲ. ತನ್ನ ಮಗುವಿನ ಬ್ಯಾಂಕ್ ಅರ್ಜಿಗೋ, ಪಾಸ್‌ಪೋರ್ಟ್ ಅರ್ಜಿಗೋ, ಮತ್ತಾವುದೇ ಮಹತ್ವದ ಪತ್ರಗಳಿಗೆ ತಾಯಿ ಸಹಿ ಹಾಕುವಂತಿಲ್ಲ. ಮಗು ವಿವಾಹಬಾಹಿರವಾಗಿ ಹುಟ್ಟಿದ್ದರೆ, ಗಂಡ ದೈಹಿಕವಾಗಿಯೋ, ಮಾನಸಿಕವಾಗಿಯೋ ಅಸಮರ್ಥನೆಂದು ಸಾಬೀತು ಮಾಡಿದರೆ ಮಾತ್ರ, ತಾಯಿಗೆ 'ಸಹಜ ಪಾಲಕ'ಳ ಹಕ್ಕು ದೊರೆಯುತ್ತದೆ.

ಇಂಥಾ ಲಿಂಗತಾರತಮ್ಯದ ಕಾನೂನನ್ನು ಪ್ರಶ್ನಿಸಿದವರು ದಿಲ್ಲಿಯ ಗೀತಾ ಹರಿಹರನ್ ಮತ್ತು ವಂದನಾ ಶಿವ.

1993ರಲ್ಲಿ ಗೀತಾ ತಮ್ಮ ಅಪ್ರಾಪ್ತ ವಯಸ್ಸಿನ ಮಗನ ಹೆಸರಲ್ಲಿ ಕೆಲವು 'ರಿಲೀಫ್ ಬಾಂಡ್'ಗಳನ್ನು ಕೊಂಡುಕೊಳ್ಳಲು ಆರ್.ಬಿ.ಐ.ಗೆ ಹೇಗಿದ್ದರು. ಆದರೆ ಆರ್.ಬಿ.ಐ. ಗೀತಾಳ ಅರ್ಜಿಯನ್ನು ತೆಗೆದುಕೊಳ್ಳಲು ನಿರಾಕರಿಸಿತು. ಕಾರಣ ಗೀತಾ ಮಗನ ಸಹಜ ಪಾಲಕಳಲ್ಲ (..) ಎಂಬುದು ಆರ್.ಬಿ.ಐ. ವಾದವಾಗಿತ್ತು. ತಂದೆ ಮಾತ್ರ ಅರ್ಜಿಯಲ್ಲಿ ಸಹಿ ಹಾಕಲು ಸಾಧ್ಯ. ಕಾರಣ ಅಪ್ರಾಪ್ತ ವಯಸ್ಸಿನ ಮಕ್ಕಳ 'ಸಹಜ ಪಾಲಕ ತಂದೆ ಮಾತ್ರ' ಎಂದು ಕಾನೂನು ಹೇಳಿಕೆಯನ್ನು ತಿಳಿಸಿತು. ಮೊಟ್ಟ ಮೊದಲಿಗೆ ಇಂಥಾ ಕಾನೂನು ನಮ್ಮ ದೇಶದಲ್ಲಿದೆ ಎಂದು ಅರಿವಿಗೆ ಬಂದ ಗೀತಾ, ಮನೆಗೆ ಬಂದು ಪತಿಗೆ ತಿಳಿಸಿದಾಗ ಆತನಿಗೂ ತಬ್ಬಿಬ್ಬು. ಕಡೆಗೆ ಪತಿ 'ನನ್ನ ಪತ್ನಿ ಮಗನ ಅರ್ಜಿಗೆ ಸಹಿ ಹಾಕುವುದಕ್ಕೆ ನನ್ನ ಆಕ್ಷೇಪವಿಲ್ಲ' ಎಂದು ಬರೆದುಕೊಟ್ಟರು. ಆದರೆ 'ಗಂಡನಿಗೆ ತಲೆ ಕೆಟ್ಟಿದೆ ಎಂದು ಹೆಂಡತಿ ಸಾಬೀತು ಮಾಡಿದಾಗ, ಇಲ್ಲ ಗಂಡ ಸಂಸಾರವನ್ನು ತೊರೆದು ಹೋಗಿದ್ದಾನೆ ಎಂದು ತೋರಿಸಿದಾಗ ಮಾತ್ರ ಹೆಂಡತಿಗೆ ಕಾನೂನು 'ಸಹಜ ಪಾಲಕ'ಳ ಹಕ್ಕು ನೀಡುತ್ತದೆ' ಎಂದು ತಿಳಿದು ಬಂದಿತು. ನಮ್ಮ ದೇಶದಲ್ಲಿ ಇಂಥಾ ಪುರಾತನ ಕಾನುನುಗಳೂ ಜಾರಿಯಲ್ಲಿವೆ ಎಂದು ಅರಿವೆಗೆ ಬಂದ ಗೀತಾ ಮತ್ತು ಪತಿ ಮೋಹನ್ ರಾವ್, ಆರ್.ಬಿ.ಐ. ವಿರುದ್ಧ ಕೇಸ್ ಹಾಕಿ, ಈ ಕಾನೂನಿಗೆ ಸವಾಲೆಸೆದರು.

ವಂದನಾ ಅವರದು ಗೀತಾಗಿಂತ ಬೇರೆಯೇ ಆದ ಕತೆ. ವಂದನಾ ಶಿವಾ ಅವರು ಜೆ. ಬಂಡೋಪಾಧ್ಯಾಯ ಅವರೊಡನೆ ವಿವಾಹವಾಗಿದ್ದರು. ತಮ್ಮದು ಸುಖೀ ಸಂಸಾರ ಎಂದುಕೊಂಡಿದ್ದಾಗಲೇ, ಒಂದು ದಿನ ಆಕೆಯ ಪತಿ ಯಾವುದೇ ಕಾರಣವಿಲ್ಲದೆ ಆಕೆಯನ್ನು ಬಿಟ್ಟು ಹೊರಟು ಹೋದರು. ಅಷ್ಟು ಸಾಲದೆಂಬಂತೆ ಮಗುವಿನ 'ಕಸ್ಟಡಿ' ಕೇಳದೆ ಇದ್ದ ಪತಿ, ತನ್ನ 'ಸಹಜ ಪಾಲಕ' ಹಕ್ಕನ್ನು ಸ್ಥಾಪಿಸಿ ವಂದನಾ ವಿರುದ್ಧ ಕೇಸ್ ಫೈಲ್ ಮಾಡಿದರು. ಅದರ ಪ್ರಕಾರ ವಂದನಾ, ಮಗುವಿನ ಬದುಕಿನ ಎಲ್ಲ ನಿರ್ಣಯಗಳನ್ನು ಸ್ವತಃ ತೆಗೆದುಕೊಳ್ಳುವಂತಿರಲಿಲ್ಲ. ಪ್ರತಿಯೊಂದನ್ನೂ ತನ್ನ ಮಾಜಿ ಪತಿಗೆ ತಿಳಿಸಬೇಕು ಎಂದಿತ್ತು. 'ಹಾಗಿದ್ದರೆ, ನೀವೇ ಏಕೆ ಮಗುವನ್ನು ನೋಡಿಕೊಳ್ಳಬಾರದು?' ಎಂದು ವಂದನಾ ಕೇಳಿದಾಗ, ಆತ ಅದಕ್ಕೆ ಸಿದ್ಧವಿರಲಿಲ್ಲ. ಒಂದು ಕಡೆ ಮಗುವಿನ ಸಂಪೂರ್ಣ ಜವಾಬ್ದಾರಿ ಹೊತ್ತು, ಮಗುವನ್ನು ಸಾಕುವ ದೈಹಿಕ, ಆರ್ಥಿಕ 'ಹೊರೆ'ಯನ್ನು ವಂದನಾ ಹೊತ್ತಿದ್ದರೂ, ತನ್ನ ಮಗುವಿನ ಬದುಕು, ಭವಿಷ್ಯ ನಿರ್ಣಯಿಸುವ ಸಂಪೂರ್ಣ ಹಕ್ಕು ಆಕೆಗಿರಲಿಲ್ಲ. ತನ್ನೆಲ್ಲ ನಿರ್ಣಯಗಳನ್ನು ಮಾಜಿ ಪತಿಗೆ 'ರಿಪೋರ್ಟ್' ಮಾಡಬೇಕಿತ್ತು. 'ತನ್ನ ಮಗನನ್ನು ಹೇಗೆ ಬೆಳೆಸಬೇಕು ಎಂಬುದನ್ನು, ತಂದೆತನದ ಜವಾಬ್ದಾರಿಯಿಂದ ಜಾರಿಕೊಂಡು, ಬಿಟ್ಟು ಹೋದ ಗಂಡ ನಿರ್ಣಯಿಸಬೇಕಿಲ್ಲ'

ಎಂದು ನಿರ್ಧರಿಸಿದ ವಂದನಾ. ಈ ಕಾನೂನನ್ನು ಪ್ರಶ್ನಿಸಿ ಕೇಸ್ ಹಾಕಿದರು.

ನಾಲ್ಕು ವರ್ಷದ ಅಂಚಿಗೆ ಈ ಮಹಿಳೆಯರಿಗಷ್ಟೇ ಅಲ್ಲ. ನಮ್ಮೆಲ್ಲರಿಗೂ ನ್ಯಾಯ ದೊರೆತಿದೆ. ಇದೇ ವರ್ಷ ಫೆಬ್ರವರಿ ತಿಂಗಳಿನಲ್ಲಿ ಸರ್ವೋಚ್ಚ ನ್ಯಾಯಾಲಯ ಮಹತ್ವದ ತೀರ್ಪು ನೀಡಿತು. 'ಹಿಂದು ಮೈನಾರಿಟಿ ಮತ್ತು ಗಾರ್ಡಿಯನ್‌ಶಿಪ್ ಆಕ್ಟ್' ಅಡಿಯಲ್ಲಿ. ಈಗಿರುವ ಕಾನೂನು ವಿಪರೀತದ ಲಿಂಗತಾರತಮ್ಯದ್ದಾಗಿದೆ. ತಂದೆಯಷ್ಟೇ ಅಲ್ಲ. ತಾಯಿಗೂ ಮಗುವಿನ 'ಸಹಜ ಪಾಲಕಳು' ಎಂದು ತೀರ್ಪು ನೀಡಿತು.

ಈ ಇಬ್ಬರು ಮಹಿಳೆಯರು ವಿದ್ಯಾವಂತರು. ಆರ್ಥಿಕವಾಗಿ ಸುಭದ್ರರು. ಇಂಥಾ ಮಹಿಳೆಯರಿಗೂ ನಮ್ಮ ದೇಶದ ತಾರತಮ್ಯದ ಕಾನೂನುಗಳು ಕಾಲಿಗೆ ತೊಡರಿದ ತೊಡಕುಗಳಾಗಬಲ್ಲವೆಂದರೆ. ಇನ್ನು ಅನಕ್ಷರಸ್ಥ ಅವಲಂಬಿತ ಮಹಿಳೆಯರನ್ನು ಇಂಥಾ ಕಾನೂನುಗಳು ಯಾವ ಬಗೆಯಲ್ಲಿ ಕಾಡಬಲ್ಲವೆಂದು ಊಹಿಸಬಹುದು. ಎಷ್ಟೋ ಮಹಿಳೆಯರು ಮಗುವಿನ 'ಕಸ್ಟಡಿ' ಮತ್ತು 'ಪಾಲಕ' ಹಕ್ಕನ್ನು ಕಳೆದುಕೊಳ್ಳುವ ಭಯದಲ್ಲಿ ಅತ್ಯಂತ ಹೀನಾಯವಾದ. ಹಿಂಸೆಯ ವಿವಾಹವನ್ನೂ ಸಹಿಸಿಕೊಂಡು ಅನುಭವಿಸುತ್ತಾರೆ.

'ನನ್ನ ಪತಿ ಮೂಲತಃ ಸ್ತ್ರೀವಾದಿಯಾಗಿದ್ದೂ. ಸಮಯ ಬಂದಾಗ. ಇಥಾ ಪಿತೃಪ್ರಧಾನ ಮೂಲದ ಕಾನೂನನ್ನು ತಮ್ಮ ಅನುಕೂಲಕ್ಕೆ ಬಳಸಿಕೊಳ್ಳಲು ಕಿಂಚಿತ್ತೂ ಹಿಂಜರಿಯಲಿಲ್ಲ' ಎಂದು 'ಸಾವಿ' ಪತ್ರಿಕೆಯಲ್ಲಿ ಹೇಳಿರುವ ವಂದನಾ 'ಕೆಟ್ಟ ಕಾನೂನುಗಳು ಅತ್ಯಂತ ಕೆಟ್ಟ ಗಳಿಗೆಯಲ್ಲಿ. ಕೆಟ್ಟದಾಗಿ ಬಳಸಿಕೊಳ್ಳುವ ಅಸ್ತ್ರವಾಗಿ ಮಹಿಳೆಯ ವಿರುದ್ಧ ಎದ್ದು ನಿಲ್ಲಬಲ್ಲವು: ಅವುಗಳನ್ನು ಇಲ್ಲವಾಗಿಸುವುದೊಂದೇ ಇದಕ್ಕೆ ಮಾರ್ಗ' ಎನ್ನುತ್ತಾರೆ.

ಬಹಳಷ್ಟು ಜನಕ್ಕೆ ಅಂಥಾ ಸಂದರ್ಭಗಳಲ್ಲಿ ಸಿಕ್ಕಿ ಹಾಕಿಕೊಳ್ಳುವವರೆಗೂ ಇಂಥಾ ಕಾನೂನುಗಳೂ ಇವೆ ಎಂದು ತಿಳಿದಿರುವುದಿಲ್ಲ. ತಿಳಿದು ಬಂದಾಗ. ಅವುಗಳನ್ನು ಪ್ರಶ್ನಿಸಬಹುದು. ಅವುಗಳ ವಿರುದ್ಧ ಹೋರಾಡಬಲ್ಲುದು ಎಂದು ಗೊತ್ತಿರುವುದಿಲ್ಲ. ಈ ಹೋರಾಟ ಸುಲಬದ್ದಲ್ಲದಿದ್ದರೂ ಕಳೆದ ದಶಕಗಳು. ಇಂಥಾ ಅನೇಕ ತಾರತಮ್ಯದ ಕಾನೂನುಗಳ ತಿದ್ದುಪಡಿಯನ್ನು ಕಂಡಿವೆ. ಇಂದಿಗೂ ಅಂಥಾ ಬಹಳಷ್ಟು ಕಾನೂನುಗಳಿವೆ.

ಮೊನ್ನೆ ನನ್ನ ಸ್ನೇಹಿತೆಯ ಅಮ್ಮನ ಮನೆಗೆ ಹೋಗಿದ್ದೆ. ದೊಡ್ಡ ಸರ್ಕಾರಿ ಹುದ್ದೆಯಲ್ಲಿದ್ದು. ಮೂರು ಮಕ್ಕಳನ್ನು ಓದಿಸಿ. ಬೆಳೆಸಿ. ಮದುವೆ ಮಾಡಿ ಕಳುಹಿಸಿ. ದೊಡ್ಡಮನೆಯನ್ನು ಕಟ್ಟಿಕೊಂಡು ನೆಮ್ಮದಿಯಾಗಿದ್ದ ಕುಟುಂಬದಲ್ಲಿ. ತಟ್ಟನೆ ಬಿರುಗಾಳಿ. ಮೊದಮೊದಲು ಯಾವಾಗಲೋ ಒಮ್ಮೆ ಇಸ್ಪೀಟು ಆಡಿ ಬರುತ್ತಿದ್ದ ಪತಿ. ನಿವೃತ್ತರಾದ ಮೇಲೆ ರೇಸಿಗೂ ಇಳಿದು ಇದ್ದಬದ್ದ ಹಣವನ್ನೆಲ್ಲ ಸುರಿದು ಮುಗಿಸಿದರು. ತಿಂಗಳ ಪಿಂಚಣಿ ಕುದುರೆ ಬಾಲಕ್ಕೆ ಹೋಗಿ. ಮೈತುಂಬಾ ಸಾಲವಾಗಿ. ಈಗ ಮಾತೆತ್ತಿದರೆ 'ಮನೆ ಮಾರುತ್ತೇನೆ' ಎನ್ನುವಾಗ. ಪತ್ನಿಯ ಎದೆ ಹೊಡೆದುಕೊಳ್ಳುತ್ತದೆ. ಕಾರಣ ಮನೆ ಕಾನೂನು ರೀತಿ ಆತನ ಸ್ವಯಾರ್ಜಿತ ಸ್ವತ್ತು. ಆತ ಅದನ್ನು ಬೇಕೆಂದಾಗ ಮಾರಬಹುದು. 'ಈ ಇಳಿವಯಸ್ಸಿನಲ್ಲಿ ಇದ್ದೊಂದು ಮನೆಯನ್ನೂ ಕಳೆದುಕೊಂಡು ತಾನು ಬೀದಿ ಪಾಲಾಗಬೇಕೆ' ಎಂಬ ಭೀತಿ ಆಕೆಯದು. 'ಅವರು ಮನೆ ಮಾರಲು ಹೊರಟರೆ ನಾನೇನೂ ಮಾಡುವಂತಿಲ್ಲವೆ?' ಕೇಳಿದರು. ನಾನು ಪರಿಚಿತ ನ್ಯಾಯವಾದಿಗಳನ್ನು ವಿಚಾರಿಸಿದಾಗ. 'ಸ್ವಯಾರ್ಜಿತ ಸ್ವತ್ತಾದರೆ. ಆತ ತನ್ನ ಇಚ್ಛೆಯಂತೆ ಮಾರಬಲ್ಲ. ಅದಕ್ಕೆ ಪತ್ನಿಯ ಅನುಮತಿ ಏನೂ ಬೇಕಿಲ್ಲ' ಎಂದು ತಿಳಿಸಿದರು. ಇಲ್ಲಿ 'ಸ್ವಯಾರ್ಜಿತ' ಎಂಬ ಪದವೇ ವಿಚಿತ್ರವಿದೆ. ನನ್ನ ತಾಯಿಯ ವಯಸ್ಸಿನ ಈ ಮಹಿಳೆ ಹೊರಗೆ ದುಡಿಯದಿದ್ದರೂ. ಬದುಕು ಪೂರಾ ಮನೆಯಲ್ಲಿ ದುಡಿದಾಕೆ. ಒಂದು ಉಪ್ಪಿನಕಾಯಿ. ಹಪ್ಪಳವನ್ನೂ ಹೊರಗಿನಿಂದ ಕೊಂಡುಕೊಳ್ಳದೆ. ದುಡ್ಡು ವ್ಯರ್ಥವಾಗುತ್ತೆ ಎಂದು ಎಲ್ಲವನ್ನೂ ಮನೆಯಲ್ಲಿ ಮಾಡಿ. ಕಾಸಿಗೆ ಕಾಸು ಕೂಡಿಸಿ. ಮನೆ ಕಟ್ಟಲು ಸಹಾಯ ಮಾಡಿದಾಕೆ. ಅಲ್ಪ ಹಣದಲ್ಲಿ ಸಂಸಾರ ಸಾಗಿಸಿ. ಹೊಟ್ಟೆಬಟ್ಟೆ ಕಟ್ಟಿ ಮಕ್ಕಳನ್ನು ಓದಿಸುವಲ್ಲಿ. ಮನೆ ಕಟ್ಟುವಲ್ಲಿ ಜೊತೆನಿಂತಾಕೆ. ಗಂಡ ಹೊರಗೆ ದುಡಿದು ಹಣ ಗಳಿಸಿದರೆ. ಈಕೆ ಒಳಗೆ ದುಡಿದು. ಹಣ ಉಳಿಸಿ. ಮನೆ ಕಟ್ಟುವುದನ್ನು ಸಾಧ್ಯವಾಗಿಸಿದ್ದಳು. ಆದರೆ ಈಗ ಮನೆ ಆತನ 'ಸ್ವಯಾರ್ಜಿತ'. ಅದರಲ್ಲಿ ಆಕೆಗೆ ಹಕ್ಕಿಲ್ಲ. 'ಪತ್ನಿಯ ಅನುಮತಿ ಇಲ್ಲದೆ ಪತಿ ತನ್ನ ಯಾವುದೇ ಸ್ವಯಾರ್ಜಿತ ಆಸ್ತಿಯನ್ನು. ಅದರಲ್ಲೂ ಇರುವ ಮನೆಯನ್ನು ಮಾರುವಂತಿಲ್ಲ' ಎಂಬ ತಿದ್ದುಪಡಿ ಬೇಕಿದೆ. ಇಂಥಾ ಅದೆಷ್ಟೋ ಕಾನೂನುಗಳನ್ನು ಮಹಿಳೆಯರು ಒಂದೊಂದಾಗಿ ಪ್ರಶ್ನಿಸಿ. ಹೋರಾಡಿ ಬದಲಿಸಬೇಕಿದೆ.

*- ನೇಮಿಚಂದ್ರ*

# ಸಾರ ಸರಸ್ವತಿ

'ಸಾರಸರಸ್ವತಿ' : ಸಂ. ವಿಜಯಾ ದಬ್ಬೆ, ಪ್ರ : ಮಹಿಳಾ ಸಾಹಿತ್ಯಿಕ, ಹುಬ್ಬಳ್ಳಿ : 1996, ಪುಟ : 248, ಬೆಲೆ ರೂ. 75/-

ಇದು ವಿಜಯಾ ದಬ್ಬೆಯವರು ಸಂಗ್ರಹಿಸಿರುವ ಸರಸ್ವತಿಯವರ ಆಯ್ದ ಬರಹಗಳನ್ನೊಳಗೊಂಡ ಕೃತಿ. ಭಾರತ ಸ್ವಾತಂತ್ರ್ಯದ ಕನಸು ಕಾಣುತ್ತಾ ಅದಕ್ಕಾಗಿ ಹೋರಾಡುತ್ತಿದ್ದ ಕಾಲ. ಅದು ಸ್ತ್ರೀ ಶಿಕ್ಷಣಕ್ಕಾಗಿ ಹೋರಾಡುತ್ತಿದ್ದ ಕಾಲವೂ ಹೌದು. ಆಗ ಶಿಕ್ಷಣದ ಅನುಕೂಲತೆ ಪಡೆದು ಸಾಹಿತ್ಯದಲ್ಲೂ ತಮ್ಮನ್ನು ತೊಡಗಿಸಿಕೊಂಡ ಸರಸ್ವತಿಯವರು ಹುಟ್ಟಿದ್ದು 1923, ಬೆಳಗಾವಿ ಜಿಲ್ಲೆಯ ಸಂಪಗಾವಿ ತಾಲ್ಲೂಕಿನ ತಿಗಡಿಯಲ್ಲಿ. ತಿರುಮಲಾಂಬ, ತ್ರಿವೇಣಿ, ಕಲ್ಯಾಣಮ್ಮ, ಶ್ಯಾಮಲಾದೇವಿ, ಬೆಳಗೆರೆ ಜಾನಕಮ್ಮ, ಎಂ.ಕೆ. ಇಂದಿರಾ ಮುಂತಾದ ನವೋದಯ ಲೇಖಕಿಯರ ಸಾಲಿಗೆ ಸೇರುವ ಸರಸ್ವತಿಯವರು 1940-41ರ ಹೊತ್ತಿಗೇ ಕನ್ನಡ, ಇಂಗ್ಲೀಷ್ ವಿದ್ಯಾಭ್ಯಾಸ ಪಡೆದು ಬರವಣಿಗೆಯಲ್ಲಿ ತಮ್ಮನ್ನು ತೊಡಗಿಸಿಕೊಂಡವರು. 'ಬರೆದು ಪುಟ ತುಂಬಿಸುವ ಹವ್ಯಾಸವೆನಗಿಲ್ಲ' ಎಂದು ಹೇಳಿಕೊಂಡಿದ್ದರೂ ಕಾವ್ಯ, ನಾಟಕ, ಕಥೆ, ಪ್ರಬಂಧಗಳಲ್ಲಿ ಮಾಡಿರುವ ಬರವಣಿಗೆ ಕಡಿಮೆಯೇನಲ್ಲ.

ನಾಡು-ನುಡಿಗೆ, ಸಮೂಹ ಜೀವನದ ಏರುಪೇರುಗಳಿಗೆ, ಚರಿತ್ರೆ-ಪುರಾಣಗಳಿಗೆ, ಮನುಷ್ಯ ಸ್ವಭಾವದ ಹಲವು ಮುಖಗಳಿಗೆ ಸರಸ್ವತಿಯವರ ಮನಸ್ಸು ತೆರೆದಿತ್ತೆಂಬುದಕ್ಕೆ ಅವರ ರಚನೆಗಳೇ ಸಾಕ್ಷಿ.

ಸರಸ್ವತಿಯವರ ಕಾವ್ಯರಚನೆ ನವೋದಯದ ಮಾರ್ಗದಲ್ಲಿದೆ. 'ಸಿರಿಮುಡಿಗೆ', 'ಶರಣ ಗಂಗಾಂಬೆ', 'ಶರಣು ತಾಯಿ ಭಾರತಿ', 'ಉದಯವಾಯಿತು ಇಂದು ಕರ್ನಾಟಕ ರಾಜ್ಯ' ಮುಂತಾದುವು ನಾಡು-ನುಡಿಗೆ ಸಂಬಂಧಿಸಿದ್ದಾದರೆ, 'ತಾಯೆ ನಿನಗೆ ಶರಣು', 'ಮರೆತಿಲ್ಲ ತಾಯಿ', 'ಕಾಯ್ದು ಕರುಣಿಸಲಿ ಕರುಣಾಳು ದೇವರು' ಕವಿತೆಗಳು ಕ್ರಮವಾಗಿ ಜಯದೇವಿತಾಯಿ ಲಿಗಾಡೆ, ಕಸ್ತೂರಿಬಾಯಿ, ಆರ್.ಬಿ. ಪಾಟೀಲರನ್ನು ಕುರಿತದ್ದಾಗಿದೆ. ಇವುಗಳಿಗಿಂತ ಭಿನ್ನವಾಗಿ ರಚನೆಗೊಂಡಿರುವ ಕವನವೆಂದರೆ, ಅಕ್ಕಮಹಾದೇವಿಯ ಜೀವನವನ್ನಾಧರಿಸಿ ಬರೆದ ಸಾಂಪ್ರದಾಯಿಕ ಶೈಲಿಯ ಕೋಲುಪದ-ಕವಿತೆ. ಇವುಗಳಲ್ಲಿ ಸಂಪೂರ್ಣವಾಗಿ ಅಲ್ಲದಿದ್ದರೂ ಅಲ್ಲಲ್ಲಿ ಪ್ರೌಢತೆಯನ್ನು ಗುರುತಿಸಬಹುದು.

ಸರಸ್ವತಿಯವರ ತಲೆಮಾರಿನ ಲೇಖಕಿಯರಲ್ಲಿ ನಾಟಕವನ್ನು ತಮ್ಮ ಅಭಿವ್ಯಕ್ತಿ ಮಾಧ್ಯಮವನ್ನಾಗಿ ಮಾಡಿಕೊಂಡವರು ಕಡಿಮೆ. 12ನೇ ಶ.ದ ಶರಣರು ಮತ್ತು ಕರ್ನಾಟಕದ ರಾಜಕೀಯ ಚರಿತ್ರೆಯಲ್ಲಿ ಪ್ರಮುಖರಾದ ಕೆಲವರನ್ನು ಕೇಂದ್ರವಾಗಿಟ್ಟುಕೊಂಡ ನಾಟಕಗಳು ಚಾರಿತ್ರಿಕ ನಾಟಕಗಳು. ಗಂಭೀರ ಸಮಸ್ಯೆ ಹಾಗೂ ಲಘು ಪ್ರಹಸನಗಳನ್ನೊಳಗೊಂಡದ್ದು ಸಾಮಾಜಿಕ ನಾಟಕಗಳು. ಸರಸ್ವತಿಯವರ ಪ್ರಮುಖ ನಾಟಕಗಳೆಲ್ಲ ಸಂಭಾಷಣಾ ಪ್ರಧಾನವಾಗಿದ್ದು, ರಂಗಭೂಮಿಗೆ ಅಗತ್ಯವೆನ್ನಿಸುವ ಕ್ರಿಯೆಯನ್ನು ತೋರುವುದಿಲ್ಲ - 'ಕಲ್ಯಾಣದ ಕೊನೆಗಾಲ', 'ನೀಲಾಂಬಿಕೆ', 'ಉಡುಗೊರೆ' ಇತ್ಯಾದಿ -

ಸರಸ್ವತಿದೇವಿಯವರ ಸ್ತ್ರೀವಾದಿ ನಿಲುವು ವ್ಯಕ್ತವಾಗುವುದು ಅವರ ಕಥೆಗಳಲ್ಲಿ. ಹೆಣ್ಣಿನ ಸಂಕಟ, ಒಳಗುದಿ, ತ್ಯಾಗ, ಸಹಿಷ್ಣುತೆ - ಇವೇ ಮುಂತಾದುವು ಕಥಾ ಸಾಹಿತ್ಯದ ಕೇಂದ್ರ ವಸ್ತು. ಸರಸ್ವತಿಯವರ ಕಾಲದಲ್ಲೇ ತಮ್ಮ ಬದುಕಿನ ಅನುಭವಗಳನ್ನು ಕಲಾತ್ಮಕವಾಗಿ ಬರವಣಿಗೆಯಲ್ಲಿ ಮೂಡಿಸುತ್ತಿದ್ದ ತ್ರಿವೇಣಿ, ಕೊಡಗಿನ ಗೌರಮ್ಮನಂಥವರ ಬರಹಗಳಿಗೆ ಹೋಲಿಸಿದರೆ ಇವರ ಸಾಕಷ್ಟು ಕಥೆಗಳು ಪೂರ್ವನಿರ್ಧಾರಿತ ಘಟನೆಗಳಂತೆ, ಕೆಲವೊಮ್ಮೆ ಹೇಳಿಕೆಗಳಂತೆ ಕಂಡುಬಂದರೂ ಆ ಮೂಲಕ ಸ್ತ್ರೀಯರ ಪರವಾಗಿ ಎತ್ತುವ ಪ್ರಶ್ನೆಗಳು ಮುಖ್ಯವೆನಿಸುತ್ತವೆ.

ಸರಸ್ವತಿಯವರ ಪ್ರಬಂಧಗಳು ಸ್ತ್ರೀವಾದಿ ನಿಲುವನ್ನು ಸಮರ್ಥವಾಗಿ ಪ್ರತಿಪಾದಿಸುತ್ತದೆ. 'ಪೂಜ್ಯ ಬಾಪೂಜಿಯವರು ಮಾಡಿದುದು ರಾಷ್ಟ್ರಸೇವೆ, ಸತಿ ಕಸ್ತೂರಿಬಾಯಿ ಮಾಡಿದುದು ಬರೀ ಮನೆಗೆಲಸವೆಂದು ಹೇಳಲಿಕ್ಕಾದೀತೆ?' ಎಂದು ಮುಖ್ಯ ಪ್ರಶ್ನೆಯೆತ್ತುವ ಅವರು ಕುಟುಂಬದೊಳಗಿದ್ದೇ ಮಹಿಳೆಯರು ನಾಡು, ನುಡಿ, ಒಳ್ಳೆಯ ರಾಷ್ಟ್ರನಿರ್ಮಾಣ ಕಾರ್ಯದಲ್ಲಿ ತೊಡಗಬಹುದೆಂಬ ಸಲಹೆಗಳನ್ನು ಕೊಡುತ್ತಾರೆ. - 'ಮನೆಯಲ್ಲಿದ್ದು ರಾಷ್ಟ್ರಸೇವೆ' 'ಸುಶಿಕ್ಷಿತ ಮಹಿಳೆ ವ್ಯಕ್ತಿ ವಿಕಾಸದೊಡನೆ ಕುಟುಂಬದ ಹಾಗೂ ಸಮಾಜದ ಸರ್ವತೋಮುಖ ವಿಕಾಸವನ್ನು ಸಾಧಿಸುವ ಚೈತನ್ಯ ಮೂರ್ತಿಯಾಗಬೇಕು. ಅಂಥ ಸಾಮಾಜಿಕ ಪ್ರಜ್ಞೆ ಅವಳಲ್ಲಿ ಮೂಡಿದಾಗ ಮಾತ್ರ ಪಡೆದ ಶಿಕ್ಷಣ ಸಾರ್ಥಕವಾಗುತ್ತದೆ' ಎಂದೆಲ್ಲ ಸ್ತ್ರೀಯರ ಶಿಕ್ಷಣದ ಅಗತ್ಯತೆಯನ್ನು ಕುರಿತು ತಮ್ಮ ಪ್ರಬಂಧಗಳಲ್ಲಿ ಹೇಳುತ್ತಾರೆ.

ಗದುಗಿನಲ್ಲಿ ನಡೆದ 43ನೇ ಕನ್ನಡ ಸಾಹಿತ್ಯ ಸಮ್ಮೇಳನದ ಮಹಿಳಾಗೋಷ್ಠಿಯ ಅಧ್ಯಕ್ಷ ಭಾಷಣದಲ್ಲಿ 'ಮಹಿಳೆಯರು ತಮಗೆ ಸಿಕ್ಕ ಅವಕಾಶವನ್ನು ಹಾಳುಹರಟೆಗೆ ಬಳಸದೆ, ಒಳ್ಳೆಯ ಸಾಹಿತ್ಯವನ್ನು ಓದುವುದರಲ್ಲಿ ತೊಡಗಬೇಕೆಂಬ ಕಿವಿ ಮಾತನ್ನು ಹೇಳುತ್ತಲೇ 'ತಮ್ಮ ಜೀವನದ ಯಥಾರ್ಥ ಸ್ವರೂಪವನ್ನು ಸಾಹಿತ್ಯದಲ್ಲಿ ಒಡಮೂಡಿಸಬೇಕೆಂದು ಹೇಳುವುದನ್ನು ಮರೆಯುವುದಿಲ್ಲ. ಇಂದಿನ ಟಿ.ವಿ. ಯುಗದಲ್ಲಿ ಓದುಗರ ಸಂಖ್ಯೆಯೇ ಕಡಿಮೆಯಾಗುತ್ತಿರುವ ಸಂದರ್ಭದಲ್ಲಿ ಸರಸ್ವತಿಯವರ ಕರೆಯನ್ನು ನಿಜವಾಗಿಯೂ ಕಾರ್ಯರೂಪಕ್ಕೆ ತಂದಲ್ಲಿ ಎಷ್ಟು ಚೆನ್ನ !

ತಮ್ಮ ಬದುಕಿನ ಕೊನೆಕೊನೆಗೆ ಬರವಣಿಗೆಯಲ್ಲಿ ಪ್ರೌಢತೆಯನ್ನು ಸಾಧಿಸುತ್ತಿದ್ದ ಸರಸ್ವತಿಯವರು ಇನ್ನೂ ಬದುಕಿದ್ದರೆ ಇನ್ನಷ್ಟು ಗಟ್ಟಿ ಬರವಣಿಗೆಯನ್ನು ನೀಡುತ್ತಿದ್ದರೇನೋ, ಆದರೆ, ಕೌಟುಂಬಿಕ ದುಡಿಮೆ ಮತ್ತು ಜವಾಬ್ದಾರಿ, ಪ್ರಿಯ ಸಂಗಾತಿಯ ಸಾವಿನ ನೋವು, ಇವುಗಳೊಂದಿಗೆ ಕಾಡಿದ ಕರುಳಿನ ರಕ್ತಸ್ರಾವದಿಂದಾಗಿ ಅವರು ಹೆಚ್ಚುಕಾಲ ಬದುಕಿ ಉಳಿಯಲು ಸಾಧ್ಯವಾಗಲಿಲ್ಲ. 1973ರಲ್ಲಿ ತೀರಿಕೊಂಡಾಗ ಅವರಿಗೆ 50 ವರ್ಷ ಮಾತ್ರ. ವ್ಯವಸ್ಥೆಯ ಸ್ವರೂಪಕ್ಕೆ, ಮನುಷ್ಯ ಸಂಬಂಧಗಳಿಗೆ, ಇತಿಹಾಸಕ್ಕೆ, ವರ್ತಮಾನಕ್ಕೆ ಪ್ರತಿಕ್ರಿಯಿಸಿದಂಥವರನ್ನು ನೆನೆಸಿಕೊಳ್ಳುವುದು ನಮ್ಮ ಕರ್ತವ್ಯವೂ ಹೌದು. ಆ ಕಾಲಕ್ಕಿದ್ದ ಕೆಲವೇ ಲೇಖಕಿಯರ ಕಾಲಿನಲ್ಲಿ ಸೇರುವ ಮತ್ತು ಕನ್ನಡ ಸಾಹಿತ್ಯಕ್ಕೆ ಸರಸ್ವತಿಯವರು ಸಲ್ಲಿಸಿರುವ ಸೇವೆ ಶ್ಲಾಘನೀಯ.

- *ಗೀತಾ. ಡಿ. ಸಿ.*

# ಪ್ರೀತಿಯ ಅಚಲಾ,

ಮೈಸೂರಿನ ಹತ್ತಿರ ಒಂದು ಸಣ್ಣ ಹಳ್ಳಿ. ಆ ಊರಿನ ಜನ ವರ್ಷಕ್ಕೊಮ್ಮೆ ಅದ್ದೂರಿಯಾಗಿ ರಾಮೋತ್ಸವ ಮಾಡುತ್ತಾರೆ. ರಾಮೋತ್ಸವ ಎಂದರೆ ಗೊತ್ತಲ್ಲ. ಶಾಸ್ತ್ರೀಯ ಸಂಗೀತದ ರಸದೌತಣ ! ಮೊನ್ನೆ ರಾಮೋತ್ಸವದಲ್ಲಿ ಆ ಊರಿನ ಜನರಿಗೆ ತಮಿಳುನಾಡಿನ ಪ್ರಸಿದ್ಧ ಗಾಯಕರೊಬ್ಬರನ್ನು ಕರೆಸುವ ಆಸೆಯಾಯಿತು. ತಮಿಳುನಾಡಿನಿಂದ ಕರೆಸುವುದು ಎಂದರೇ ಸ್ವಲ್ಪ ದುಬಾರಿಯೇ ಆದರೂ ಊರಿನ ಜನ ಹಣ ಸಂಗ್ರಹಿಸಿದರು. ಗಾಯಕನನ್ನು ಮಾತ್ರ ತಮಿಳುನಾಡಿನಿಂದ ಕರೆಸುವುದು, ಪಕ್ಕವಾದ್ಯದವರನ್ನು ನಮ್ಮವರನ್ನೇ ಗೊತ್ತುಮಾಡಿಕೊಳ್ಳುವುದು ಎಂದು ನಿಶ್ಚಯವಾಯಿತು. ಎಲ್ಲ ವ್ಯವಸ್ಥೆಯೂ ಆಯಿತು. ಊರಿಗೆ ಊರೇ ಸಂಭ್ರಮದಿಂದ ರಾಮಮಂದಿರದ ಮುಂದೆ ನೆರೆಯಿತು. ಪಕ್ಕವಾದ್ಯದವರೂ ತಯಾರಾದರು. ಮುಖ್ಯಗಾಯಕ ತಮ್ಮ ಕಾರಿನಲ್ಲಿ ಸ್ವಲ್ಪ ತಡವಾಗಿಯೇ ಆಗಮಿಸಿದರು. ಇನ್ನೇನು ವೇದಿಕೆ ಹತ್ತಬೇಕು ಗತ್ತಿನಿಂದ 'ಪಕ್ಕವಾದ್ಯಕ್ಕೆ ಯಾರ್‍ಯಾರಿದ್ದಾರೆ' ಎಂದು ಕೇಳಿದರು. ಸಂಗೀತದಲ್ಲಿ ಮುಖ್ಯಗಾಯಕರಷ್ಟೇ ಸಾಧನೆ ಮಾಡಿದ ಕಲಾವಿದರೇ ಪಕ್ಕವಾದ್ಯ ನುಡಿಸಬೇಕಾಗುತ್ತದೆ. ಬಹಳ ವರ್ಷಗಳಿಂದ ಇಂಥ ಕಛೇರಿಗಳನ್ನು ಏರ್ಪಡಿಸುತ್ತಿದ್ದ ಊರವರಿಗೆ ಈ ವಿಚಾರಗೊತ್ತಿಲ್ಲವೆ ? ಬಹಳ ಹೆಮ್ಮೆಯಿಂದ ಕರ್ನಾಟಕದ ಈ ಕಲಾವಿದರನ್ನು ಪರಿಚಯಿಸಿದರು. "ಏನು ನನಗೆ ಪಿಟೀಲು ನುಡಿಸಲು ಒಬ್ಬ ಮಹಿಳೆಯೇ, ನಾನು ವೇದಿಕೆಯನ್ನೇ ಹತ್ತುವುದಿಲ್ಲ" ಎಂದು ಗುಡುಗುತ್ತಾ ಈ ಗಾಯಕ ಮಹಾಶಯ ತಮ್ಮ ಕಾರಿನಲ್ಲಿ ಹೋಗಿ ಕುಳಿತುಬಿಟ್ಟರು ! !

ಅದೊಂದು ಸಣ್ಣ ಊರು. ಆಗಲೇ ರಾತ್ರಿಯಾಗಿಬಿಟ್ಟಿದೆ. ಈ ಗಾಯಕ ಶ್ರೇಷ್ಠ ಬಂದಿರುವುದೇ ಎರಡು ಗಂಟೆ ತಡವಾಗಿ ! ಸಾವಿರಾರು ಜನ ಸಂಗೀತ ಕೇಳಲು ನೆರೆದಿದ್ದಾರೆ. ಈಗ ಸಂಘಟಕರು ಏನು ಮಾಡಬೇಕು? ಅವರು ಆಹ್ವಾನಿಸಿದ ವೈಲಿನ್ ವಾದಕಿ ಕರ್ನಾಟಕದಲ್ಲಷ್ಟೇ ಅಲ್ಲ, ತಮಿಳು ನಾಡಿನಲ್ಲೂ ಪ್ರಸಿದ್ಧಿಯಾದವರೇ. ಆ ನಂಬಿಕೆಯ ಮೇಲೆ ಅವರನ್ನು ಕರೆಸಲಾಗಿತ್ತು. ಆದರೆ ಆಕೆ ಮಹಿಳೆ ಎನ್ನುವ ಕಾರಣಕ್ಕಾಗಿಯೇ ಈ ಪುರುಷ ಶ್ರೇಷ್ಠ ಇಲ್ಲದ ತಕರಾರು ತೆಗೆದಿದ್ದಾನೆ. ಕೊನೆಗೆ ವೈಲಿನ್ ವಾದನವಿಲ್ಲದೆ ಅಂದಿನ ಕಛೇರಿ ನಡೆಯಿತು. ಆ ಕಲಾವಿದೆ ತನ್ನನ್ನು ಇಳಿಸಿದ ಮನೆಯಲ್ಲಿ ಅಪಮಾನವನ್ನು ನುಂಗಿಕೊಳ್ಳುತ್ತಾ ಇಡೀ ರಾತ್ರಿ ಕಳೆಯಬೇಕಾಯಿತು ! !

ಒಬ್ಬ ಮೃದಂಗ ವಿದ್ವಾಂಸ ಘಟನುಡಿಸಲು ಬಂದ ಮಹಿಳೆ ಇದೇ ರೀತಿ ವೇದಿಕೆಯಿಂದ ಇಳಿಸಿದ ಪ್ರಸಂಗ ಬೆಂಗಳೂರಿನಲ್ಲೇ ನಡೆಯಿತು. ಒಬ್ಬ ಕಲಾವಿದ "ನಾನು ತುಂಬಾ ಮಡಿವಂತ. ತಂಬೂರಿ ಶೃತಿಹಾಕಲೂ ವೇದಿಕೆಯ ಮೇಲೆ ಮಹಿಳೆಯಿರಬಾರದು" ಎಂದು ಹೇಳಿಕೆ ಕೊಟ್ಟನಂತೆ ! !

ಇದು ಮಡಿಯಲ್ಲ. ಅತ್ಯಂತ ಹೊಲಸು ಮೈಲಿಗೆ ಮನಸ್ಸಿನ ಆಟಗಳು ಇವೆಲ್ಲ. ಸಂಗೀತವನ್ನು ಸರಸ್ವತಿಯ ಹೆಸರಿನಲ್ಲಿ ಆರಾಧಿಸುವುದು. ಅದೇ ಕ್ಷೇತ್ರದಲ್ಲಿ ಸಾಧನೆ ಮಾಡಿದ ಜೀವಂತ ಸರಸ್ವತಿಯರನ್ನು ಈ ರೀತಿ ಅವಮಾನಿಸುವುದು ! ಕಲೆ ಮತ್ತು ಸಾಧನೆಗಳಿಗೆ ಪ್ರತಿಭೆ ಮತ್ತು ಸೃಜನ ಶೀಲತೆಗಳೇ ಹೊರತು ಲಿಂಗಾಧಾರಿತವಾಗಿ ಅಲ್ಲ ಎನ್ನುವುದನ್ನು ಈ ಭ್ರಮಾಧೀನ ಮೈಲಿಗೆ ಮನಸ್ಸುಗಳು ಅರ್ಥಮಾಡಿಕೊಂಡರೆ ಒಳಿತು.

- ಶತಭಿಷಾ

# ಪತ್ರಿಕೆಗಳು ಮತ್ತು ಸಾಮಾಜಿಕ ಕಳಕಳಿ

ಸೆಪ್ಟೆಂಬರ್ 28 ರಂದು ಪ್ರಜಾವಾಣಿ ಮತ್ತು ಡೆಕ್ಕನ್ ಹೆರಾಲ್ಡ್‌ನಲ್ಲಿ ಸುಮಂಗಲಿ ಸೇವಾಶ್ರಮದಿಂದ ದತ್ತು ಕೊಡಲ್ಪಟ್ಟ ಮಗುವನ್ನು ಕುರಿತಂತೆ ಒಂದು ಸುದ್ದಿ ಕತೆ ಪ್ರಕಟವಾಯಿತು. ಸುಮಂಗಲಿ ಸೇವಾಶ್ರಮದ ಕಾರ್ಯ ವೈಖರಿಯನ್ನು ಕಂಡವರಿಗೆಲ್ಲಾ ಇದು ಒಂದು ದಿಗ್ಭ್ರಮೆಯ, ಆತಂಕದ ಸುದ್ದಿ. ಅದರ ಹಿತೈಷಿಗಳಂತೂ ಈ ಸುದ್ದಿಯಿಂದ ಕಂಗಾಲಾದರು. ಯಾಕೆಂದರೆ ಸುಮಂಗಲಿ ಸೇವಾಶ್ರಮ ಕಳೆದ ಹಲವು ವರ್ಷಗಳಿಂದ ಸೇವಾ ಮನೋಭಾವದಿಂದ ಕೆಲಸ ಮಾಡುತ್ತಿರುವ ಸಂಸ್ಥೆ. ಹಲವಾರು ನೊಂದ ಮಹಿಳೆಯರಿಗೆ ಆಶ್ರಯಧಾಮವಾಗಿದೆ. ನೆಲೆ ಇಲ್ಲದೆ ಅಸಹಾಯಕರಾಗಿರುವ ಮಹಿಳೆಯರಲ್ಲಿ ಆತ್ಮಸ್ಥೈರ್ಯ ತುಂಬಿ ಅವರ ಬದುಕಿಗೆ ಆಸರೆ ನೀಡುತ್ತಿದೆ. ಕೇವಲ ಆಸರೆಯಷ್ಟೇ ನೀಡದೆ ಸ್ವಾವಲಂಬಿಗಳಾಗಿ ಬದುಕುವ ಅವಕಾಶವನ್ನೂ ಕಲ್ಪಿಸುತ್ತಿದೆ. ಹಲವಾರು ಅನಾಥ ಬಡಮಕ್ಕಳಿಗೆ ಮನೆಯಾಗಿರುವ ಈ ಸಂಸ್ಥೆ ಆ ಮಕ್ಕಳಿಗೆ ಪ್ರೌಢಶಾಲೆಯವರೆಗೆ ಶಿಕ್ಷಣದ ಸೌಲಭ್ಯವನ್ನು ಒದಗಿಸಿದೆ. ಸಂಸ್ಥೆಯ ಸಹಾಯ ಕೋರಿ ಬಂದವರಿಗೆ ಇಲ್ಲವೆನ್ನದೆ ಸಹಾಯಹಸ್ತ ಚಾಚುವ ಈ ಸಂಸ್ಥೆ, ಅವರಿಗೆ ಪರ್ಯಾಯ ವ್ಯವಸ್ಥೆಗಳನ್ನು ಕಲ್ಪಿಸಿಕೊಡುತ್ತಿದೆ. ಈ ಎಲ್ಲ ಕ್ರಿಯೆಗಳ ಹಿಂದೆ ಇರುವುದು ಸದ್ಭಾವನೆ ಮಾತ್ರ ಎನ್ನುವುದು ಹಲವು ವರ್ಷಗಳ ಅನುಭವಗಳಿಂದ ನಮ್ಮ ಇಡೀ ಸಮಾಜ ಕಂಡುಕೊಂಡಿರುವ ಸತ್ಯ ಸ್ಥಿತಿ. ಆದರೆ ಜನಪ್ರಿಯ ದಿನಪತ್ರಿಕೆಗಳು ಈ ಸುದ್ದಿ ಪ್ರಕಟಿಸಿ 9 ವರ್ಷದ ಮಗುವನ್ನು ಪೋಷಕರ ಅನುಮತಿಯಿಲ್ಲದೆ ದುಡಿತಕ್ಕೆ ಕಳುಹಿಸುವ ಯೋಚನೆಯಿತ್ತೆಂಬಂತೆ ಬರೆದಿರುವುದು ಸತ್ಯಕ್ಕೆ ದೂರವಾದ್ದು ಇಲ್ಲಿ ಪತ್ರಿಕೆಯ ಬೇಜವಾಬ್ದಾರಿತನ ಮತ್ತು ಏಕಮುಖ ಸಂಶೋಧನೆಯ ವೈಖರಿ ಎದ್ದು ಕಾಣುತ್ತದೆ.

ಕಡುಬಡತನದ, ತಾಯಿ ಇಲ್ಲದ, ಮಗುವಿನ ಪಾಲಕರು ಮಗುವನ್ನು ಆಶ್ರಮದ ಆಶ್ರಯಕ್ಕೆ ಕೊಟ್ಟು, ದತ್ತುಕೊಡಲು ಅನುಮತಿ ನೀಡಿದ್ದು ನಿಜ. ಮಗುವನ್ನು ದತ್ತು ಕೊಡುವ ಪ್ರಕ್ರಿಯೆಯಲ್ಲಿ ಆಶ್ರಮದವರ ತಿಳುವಳಿಕೆಯ ಅಭಾವವಿರಬಹುದಾದರೂ ಪತ್ರಿಕೆಯಲ್ಲಿ ಪ್ರಕಟವಾದಂತೆ ಕ್ರೌರ್ಯ, ಅಮಾನವೀಯತೆಯಂತೂ ಇಲ್ಲ. ಇಂತಹ ಒಂದು ಬರವಣಿಗೆಯ ಹಿಂದಿನ ಉದ್ದೇಶವಾದರೂ ಏನು ? ಬಾಲಕಾರ್ಮಿಕರ ಹಿತರಕ್ಷಿಸುತ್ತೇವೆಂದು ಘೋಷಿಸಿಕೊಂಡ 'ವಿಕಾಸ' ಎಂಬ ಎನ್.ಜಿ.ಓ. ಸಂಸ್ಥೆ ಸುಮಂಗಲಿ ಸೇವಾಶ್ರಮದ ಏಳಿಗೆಯನ್ನು ಸಹಿಸದೆ ಈ ಕೃತ್ಯ ನಡೆಸಿರಬಹುದೇ ಎಂಬ ಅನುಮಾನ ಬರುತ್ತದೆ. ಪತ್ರಿಕೆಯನ್ನು ಅವರು ಬಳಸಿಕೊಂಡ ರೀತಿ ಅನುಮಾನವನ್ನು ದೃಢಪಡಿಸುತ್ತದೆ. ಪಾಲನೆಗಾಗಿ ಆಶ್ರಮಕ್ಕೆ ಬಂದ ಬಾಲಕಿ ಸುಮಿತ್ರಾಳನ್ನು ನೆಪ ಮಾಡಿಕೊಂಡು ವಿದೇಶಿ ಅನುದಾನ ಪಡೆಯುವ ಇನ್ನು ಹತ್ತು ಹಲವಾರು ಸಂಸ್ಥೆಗಳು ಮೆರವಣಿಗೆ ನಡೆಸಿ ಈ ವಿಷಯವನ್ನು ಕುರಿತು ಕಳಪೆ ರಾಜಕೀಯ ಮಾಡುತ್ತಿರುವುದನ್ನು ಗಮನಿಸಿದರೆ ಒಟ್ಟಾರೆಯಾಗಿ ಇಂತಹ ಸಂಸ್ಥೆಗಳ ಸಮಾಜ ಘಾತುಕ ಧೋರಣೆಗಳ ಬಗೆಗೆ ಆತಂಕವಾಗುತ್ತದೆ. ಇನ್ನು ದತ್ತು ಪಡೆಯಲು ಇಚ್ಛಿಸಿದ ಸಚಿವೆಯಾದರೂ ಮೊದಲು ದತ್ತು ತೆಗೆದುಕೊಳ್ಳುವ ಉದ್ದೇಶವಿತ್ತು ಎಂದು ನಂತರ ಇಲ್ಲವೆಂತಲೂ ಗೊಂದಲದ ಹೇಳಿಕೊಟ್ಟು ತಮ್ಮ ರಾಜಕೀಯ ದೊಂಬರಾಟವನ್ನು ಮೆರೆದ್ದಿದಾರೆ.

ಸಾಮಾಜಿಕ ಕಳಕಳಿಯಿಂದ ಕೂಡಿದ ನಿಸ್ವಾರ್ಥ ಮನೋಭಾವದ ಸಂಸ್ಥೆಯನ್ನು ಕಟ್ಟಿ ಬೆಳೆಸುವುದು ಅತ್ಯಂತ ಪ್ರಯಾಸದ ಕೆಲಸ. ಇಂತಹ ಸಂಸ್ಥೆಯ ಕುರಿತು ನಿರಾಧಾರ ಆರೋಪ ಮಾಡುವುದು ಪ್ರಾಮಾಣಿಕವಾಗಿ ದುಡಿಯುತ್ತಿರುವ ಸಂಸ್ಥೆಗೆ ಕೆಟ್ಟ ಹೆಸರನ್ನು ತರುತ್ತದಲ್ಲದೆ ಅದು ಮಾಡುತ್ತಿರುವ ಒಳ್ಳೆಯ ಕೆಲಸಕ್ಕೆ ಅಡ್ಡಿ ಮಾಡಿದಂತೆಯೂ ಆಗುತ್ತದೆ. ಇಂತಹ ದುಷ್ಕೃತ್ಯಗಳಿಂದ 'ವಿಕಾಸ' ಸಂಸ್ಥೆ ವಿಕಸಿತವಾಗಬೇಕಿದೆಯೇ?

# ಫೆಮಿನಿಸ್ಟರೋ ವುಮನಿಸ್ಟರೋ ?

ಅಮೆರಿಕದ ಕಪ್ಪು ಬರಹಗಾರ್ತಿ / ವಿಮರ್ಶಕಿ. ಆ್ಯಲಿಸ್ ವಾಕರ್ 'In search of our Mother's Gardens' ಎಂಬ ತನ್ನ ಲೇಖನ ಸಂಗ್ರಹದಲ್ಲಿ 'ವುಮನಿಸಂ' ಎಂದುದೊಂದು ಪರಿಕಲ್ಪನೆಯನ್ನು ಬೆಳೆಸಿದ್ದಾಳೆ. ಈ 'ವುಮನಿಸಂ' 'ವುಮನಿಸ್ಟ್' ಗಳು 'ಫೆಮಿನಿಸಂ'. 'ಫೆಮಿನಿಸ್ಟ್' ಎಂಬ ಐರೋಪ್ಯ ಬಿಳಿ ಸ್ತ್ರೀಯರ ಸ್ತ್ರೀವಾದಕ್ಕೆ ಪ್ರತಿದ್ವಂದ್ವಿಯಾಗಿ ಎಂಬಂತೆ ಈಕೆ ಪ್ರತಿಪಾದಿಸಲು ಯತ್ನಿಸಿದ್ದಾಳೆ. ಸಾಮಾನ್ಯವಾದ ಡಿಕ್ಷನರಿ ಅರ್ಥವನ್ನು ಪರಿಗಣಿಸಿದರೆ Womanish - ಎಂಬುದಕ್ಕೆ Girlish, Frivolous, irresponsible, non serious - ಎಂಬ ಅರ್ಥಗಳಿವೆ. ಈ ರೀತಿಯ ಹುಡುಗಾಟಿಕೆ. ಬೇಜವಾಬ್ದಾರಿತನ. ಚಂಚಲತೆಗಳನ್ನು ಸ್ತ್ರೀಸ್ವಭಾವವೆಂದು ಸೂಚಿಸುವ ಗ್ರಹಿಕೆಗಳಿಗೆ ವಿರುದ್ಧವಾಗಿ ವಾಕರ್. 'ವುಮನಿಷ್' ಪದದಿಂದಲೇ ತಾನು ಕಟ್ಟಿರುವ 'ವುಮನಿಸ್ಟ್' ಪದಕ್ಕೆ "ಒಬ್ಬ ಕಪ್ಪು ಸ್ತ್ರೀವಾದಿ ಅಥವಾ ವರ್ಣೀಯ ಸ್ತ್ರೀವಾದಿ" ಎಂಬ ಅರ್ಥವನ್ನು ಹೇಳುತ್ತಾಳೆ. ಕಪ್ಪು ಜನರ ಜಾನಪದದಲ್ಲಿ ಹೆಣ್ಣುಮಕ್ಕಳ ತಾಯಂದಿರನ್ನು ಸೂಚಿಸಲು ಬಳಸುವ ಒಂದು ಪದ ಎಂಬುದೂ ಇದಕ್ಕೆ ಆಕೆ ನೀಡಿರುವ ಇನ್ನೊಂದು ಅರ್ಥ. ಹಾಗೆಯೇ ಕ್ರೂರಿ. ದರ್ಪಿಷ್ಟ. ಧೈರ್ಯಶಾಲಿ. ಛಲವಾದಿ ನಡತೆಯನ್ನೂ 'ವುಮನಿಸ್ಟ್' ಎನ್ನಲಾಗುತ್ತದೆ. ನಾಲ್ಕನೆಯ ಅರ್ಥವೂ ಒಂದಿದೆ. ಒಬ್ಬರಿಗೆ ಸರಿ ಎಂದು ಭಾವಿಸಿರುವುದಕ್ಕಿಂತ ಹೆಚ್ಚಿನದನ್ನು ತಿಳಿಸಲು ಬಯಸುವ ಗುಣ. ಗುಂಪುಕಾರ್ಯಗಳಲ್ಲಿ ಆಸಕ್ತಿ ಹೊಂದಿರುವುದು. ಪ್ರೌಢರಂತೆ ವರ್ತಿಸುವುದು. ಪ್ರಬುದ್ಧರೇ ಆಗಿರುವುದು. ಗಂಭೀರವಾಗಿರುವುದು ಇತ್ಯಾದಿ.

ವುಮನಿಸ್ಟ್ ಪದಕ್ಕೆ ಆ್ಯಲಿಸ್ ವಾಕರ್ ವಿಶಾಲವಾದ ವ್ಯಾಪಕವಾದ ಇನ್ನಷ್ಟು ಅರ್ಥಗಳನ್ನು ನೀಡುತ್ತಾಳೆ. (1) ಇತರ ಸ್ತ್ರೀಯರನ್ನು ಪ್ರೀತಿಸುವವಳು (ಈ ಪ್ರೀತಿ ಲೈಂಗಿಕವಿರಬಹುದು. ಲೈಂಗಿಕೇತರ ರೂಪದ್ದೂ ಆಗಿರಬಹುದು).

(2) ಸ್ತ್ರೀ ಸಂಸ್ಕೃತಿಯನ್ನು ಮೆಚ್ಚುವಾಕೆ. ಅದನ್ನೇ ಆಚರಿಸುವಾಕೆ. [ಅಂದರೆ ಭಾವನಾಶೀಲತೆ. (ಅಳು. ನಗು ಮುಂತಾದ್ದು) ಚಲನಶೀಲತೆ. ಸ್ತ್ರೀಶಕ್ತಿಗಳನ್ನು ಮೆಚ್ಚಿ ಆಚರಿಸುವಾಕೆ].

(3) ಇಡೀ ಜನಾಂಗದ ಸ್ತ್ರೀ ಪುರುಷರೆಲ್ಲರ ಸಮಗ್ರತೆ. ಮತ್ತು ಉಳಿವಿಗೆ ಬದ್ಧಳು.

(4) ಸಂಗೀತ. ನೃತ್ಯ. ಚಂದ್ರ. ಚೈತನ್ಯ. ಪ್ರೇಮ. ಆಹಾರ. ಪೂರ್ಣತ್ವ. ಹೋರಾಟ. ಜನತೆ ಹಾಗೂ ತನ್ನನ್ನೂ ಯಾವುದರ ಎಗ್ಗಿಲ್ಲದೆ. ಪರಿವೆಯಿಲ್ಲದೆ ಪ್ರೀತಿಸುವವಳು.

(5) "Womanist is to Feminist as Purple to Lavender" ಸ್ತ್ರೀವಾದ. ಪಶ್ಚಿಮದ ಬಿಳಿಯ ಮಹಿಳೆಯರನ್ನಷ್ಟೇ ಒಳಗೊಂಡಿರುವುದು ಬರೀ ಲ್ಯಾವೆಂಡರ್. ಅದು ಅಸಮಗ್ರ. ಅವರೊಂದಿಗೆ ನೇರಳೆ ಬಣ್ಣ ಎಂದರೆ ವರ್ಣೀಯರನ್ನೂ ಒಳಗೊಂಡಾಗ ಹುಟ್ಟುವ ಸಮಗ್ರ ಸ್ತ್ರೀವಾದವೇ Womanism ಎನ್ನುತ್ತಾಳೆ ಆ್ಯಲಿಸ್‌ವಾಕರ್.

ಮೂಲತಃ ತೀವ್ರಗಾಮಿ ಸ್ತ್ರೀವಾದಿಗಳು ಪ್ರತಿಪಾದಿಸಿದ ಹೆಣ್ತನದ ಅಂತಃಸತ್ವದ ಪರಿಕಲ್ಪನೆಯನ್ನು ಜನಾಂಗದ ರಚನೆಗೂ ಹಿಗ್ಗಿಸಿ. ಈಕೆ ಕಪ್ಪು ಮಹಿಳೆಯರ ಸ್ವಂತಿಕೆ. ಗುರುತಿನ ಪ್ರಶ್ನೆಗಳನ್ನು ಚರ್ಚಿಸುತ್ತಾಳೆ. 'ವರ್ಣೀಯ ಸ್ತ್ರೀಯರು' 'ತೃತೀಯ ಜಗತ್ತಿನ ಸ್ತ್ರೀಯರು' ಮುಂತಾಗಿ ತಮ್ಮ ಬಹು ಸಂಬಂಧಾತ್ಮಕ ಗುರುತುಗಳನ್ನು ಸ್ಥಾಪಿಸಲೆತ್ನಿಸುವ ಈ ದೃಷ್ಟಿಕೋನ 'ಪುರುಷದೃಷ್ಟಿಕೋನ' 'ಸ್ತ್ರೀ ದೃಷ್ಟಿಕೋನ' ಎಂಬ ರಚನೆಗಳಂತೆ 'ಏಕರೂಪದ್ದೇ' ಆಗಿ ಬಿಡುವ ಅಪಾಯಕ್ಕೆ ಹೊರತಲ್ಲ.

-ಸುಮಿತ್ರ

## ಶಾಂತಿ ಪ್ರೇಮ ಸಹನೆ - ಸಹಬಾಳ್ವೆ ಇದು ನಮ್ಮ ಮತವಾಗಲಿ

ದ್ವೇಷವನ್ನು ವಿರೋಧಿಸಿ ಮತೀಯ ಅಂದಾಭಿಮಾನವನ್ನು ದೂರ ಮಾಡಿ ಮತಬ್ರಾಂತಿಯನ್ನು ತಿರಸ್ಕರಿಸಿ ನಮ್ಮ ರಾಷ್ಟ್ರದ ಸಂದ ಜಾತ್ಯಾತೀತ ಹಂದರವನ್ನು ವಿಚಿದ್ರಕಾರಕ ಶಕ್ತಿಗಳು ಹಾಳು ಮಾಡಲು ಎಡೆಗೊಡಬೇಡಿ. ಭಾರತದ ಒಗ್ಗಟ್ಟು ಹಾಳಾದರೆ ರಾಷ್ಟ್ರಶಕ್ತಿ ಕುಂದುತ್ತದೆ. ಭಾರತ ಅಶಕ್ತವಾಗಲು ನಾವೆಂದಿಗೂ ಅವಕಾಶ ನೀಡಬಾರದು.

ಶತಶತಮಾನಗಳಿಂದ ಭಾರತದ ಪವಿತ್ರ ನೆಲದಲ್ಲಿ ವಿವಿಧ ಜನಾಂಗ, ಜಾತಿ, ಸಂಸ್ಕೃತಿಗಳು ಒಟ್ಟಿಗೆ ಅರಳಿದೆ. ಬಾಳಿ ಬದುಕಿವೆ. ರಾಷ್ಟ್ರದ ಸಮಗ್ರ ಪ್ರಗತಿಗೆ ತಮ್ಮ ಕೊಡುಗೆಯನ್ನು ನೀಡಿ, ದೇಶಕ್ಕೆ, ವಿಶ್ವದಲ್ಲಿಯೇ ಸರಿಪಾಟಿಯಿಲ್ಲದೆ ಅದ್ವಿತೀಯ ಸ್ಥಾನವನ್ನು ಗಳಿಸಿಕೊಟ್ಟಿವೆ.

ನಮ್ಮ ರಾಷ್ಟ್ರದ ಜಾತ್ಯಾತೀತ ತಳಹದಿ ಅಭದ್ರವಾಗುತ್ತಿದೆ. ಮತೀಯ ದ್ವೇಷಾಸೂಯಗಳಿಂದ ನಮ್ಮ ಪ್ರಗತಿ ಕುಂಠಿತವಾಗಿ ಆರ್ಥಿಕ ವಿಕಾಸ ಅಸ್ತವ್ಯಸ್ತವಾಗುವುದಕ್ಕೆ ಅವಕಾಶ ಮಾಡಿಕೊಡುವದು ಸರಿಯೆ? ವಿಮರ್ಶಿಸಿ ನೋಡಿ.

---

ನಮ್ಮ ರಾಜ್ಯಾಂಗದಲ್ಲಿ ಅಳವಡಿಸಿರುವ ಪವಿತ್ರವಾದ ಜಾತ್ಯಾತೀತ ಆದೇಶಗಳಿಗೆ ಕಳಂಕ ಆಗುವುದು ನ್ಯಾಯವೇ ? ವಿಚಾರ ಮಾಡಿ.

ರಾಷ್ಟ್ರದ ಶಾಂತಿ ಮತ್ತು ಪ್ರಗತಿಗಾಗಿ ಒಮ್ಮತ್ವದಿಂದ ಒಂದು ಗೂಡಿ ಕೋಮು ಸೌಹಾರ್ಧದ ಕಾರ್ಯಕ್ರಮಗಳಲ್ಲಿ ಭಾಗವಹಿಸಿ.

ಮತೀಯ ಮನೋವಿಕಾರಗಳನ್ನು ಕಿತ್ತೊಗೆದು ಒಗ್ಗಟ್ಟು - ಒಮ್ಮನಸ್ಸಿನಿಂದ ತಲೆ ಎತ್ತಿ ನಿಲ್ಲೋಣ. "ವಿಶ್ವದ ಎಲ್ಲಾ ರಾಷ್ಟ್ರಗಳ ಎಲ್ಲ ಜನಾಂಗಗಳ ತಿರಸ್ಕೃತಗೊಂಡವರಿಗೆ ಮತ್ತು ನಿರಾಶ್ರಿತರಿಗೆ ಆಶ್ರಯ ನೀಡಿದ ಪವಿತ್ರ ರಾಷ್ಟ್ರ ನನ್ನದೆಂಬ ಹೆಮ್ಮೆ ಮತ್ತು ಅಭಿಮತ ನನ್ನದು" - ಎಂಬ ಸ್ವಾಮಿ ವಿವೇಕಾನಂದರ ವಾಕ್ಯವನ್ನು ನಾವೆಲ್ಲರೂ ಪುನರುಚ್ಚಿಸೋಣ.

*- ಕರ್ನಾಟಕ ವಾರ್ತೆ*

CPMG/KA/BG-8/99

# ಮನವಿ

ಕಳೆದ ಹನ್ನೆರಡು ವರ್ಷಗಳಿಂದ ನಿರಂತರವಾಗಿ ನಡೆದುಬರುತ್ತಿರುವ ಪತ್ರಿಕೆಯಾದ 'ಅಚಲ' ಮಹಿಳಾ ಜಾಗೃತಿಯ ಧ್ಯೇಯಕ್ಕೆ ಬದ್ಧವಾಗಿರುವ ದ್ವೈಮಾಸಿಕ ,ಕರ್ನಾಟಕದ ಎಲ್ಲ ಭಾಗಗಳಲ್ಲಿ ನಮ್ಮ ಚಂದಾದಾರರಿದ್ದಾರೆ ; ನಾಡಿನ ಅನೇಕ ಹಿರಿಯ, ಕಿರಿಯ ಚಿಂತಕರು, ವಿಚಾರವಂತರು, ಸಾಹಿತಿಗಳು ಅಭಿಮಾನವಿಟ್ಟು ನಮ್ಮ ಪತ್ರಿಕೆಗೆ ಲೇಖನಗಳನ್ನು ಬರೆದುಕೊಟ್ಟಿದ್ದಾರೆ ಕೊಡುತ್ತಿದ್ದಾರೆ.ಹೀಗಾಗಿ ಆರಂಭದಿಂದ ಇಂದಿನವರೆಗೆ ಒಂದು ಉನ್ನತ ಮಟ್ಟದ ವೈಚಾರಿಕ ಲೇಖನಗಳನ್ನು ಸಂಶೋಧನಾ ವರದಿಗಳನ್ನು ಹಲವು ಸಾಮಾಜಿಕ ಸಮಸ್ಯೆಗಳ ಚರ್ಚೆಯನ್ನು ಮಹಿಳೆಯರ ದೃಷ್ಟಿಯಿಂದ ನಾವು ಪ್ರಕಟಿಸುತ್ತಾ ಬಂದಿದ್ದೇವೆ.

ಆದರೆ ಧ್ಯೇಯಬದ್ಧ ಮಹಿಳಾ ಪತ್ರಿಕೆಗಳೇ ಅಭಾವವಾಗಿರುವ ಈ ನಾಡಿನಲ್ಲಿ 'ಅಚಲ' ದಂಥ ಪತ್ರಿಕೆಗೆ ಎಷ್ಟು ಪ್ರೋತ್ಸಾಹ ದೊರೆಯಬೇಕೋ ಅದು ಇದುವರೆಗೂ ದೊರೆತಿಲ್ಲ. ಚಂದಾಹಣವಲ್ಲದೆ ಬೇರೆ ಯಾವ ಆದಾಯಗಳೂ ನಮ್ಮ ಪತ್ರಿಕೆಗೆ ಇಲ್ಲ. ಆದ್ದರಿಂದ ಓದುಗರಲ್ಲಿ ನಾವು ವಿನಮ್ರವಾಗಿ ಭಿನ್ನವಿಸಿಕೊಳ್ಳುವುದೇನೆಂದರೆ ದಯವಿಟ್ಟು ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ನಮ್ಮ ಪತ್ರಿಕೆಗೆ ಚಂದಾದಾರರಾಗಲಿ. ಈಗಾಗಲೇ ಚಂದಾದಾರರಾಗಿರುವವರು ದಯವಿಟ್ಟು ನವೀಕರಿಸಿರಿ.

---

**Book-Post / News Letter**

*To :*

*Smt/Sri*

---

*Achala - Edited by* **Dr. N. Gayathri Published by Dr. G. Ramakrishna on behalf of Jagruthi Mahila Adhyayana Kendra, 713, Vijaya Mansion, I Main, R.P.C Layout, Bangalore - 560 040 Printed at Lipi Mudrana, Basavanagudi, Bangalore - 560 004.**